# LIFE

OF

# IR SALAR JUNG

G. C. S. I.,

**The Great Minister**

OF

HAIDERABAD.

---

ಹೈದರಾಬಾದು ಸಂಸ್ಥಾನದ ಮಂತ್ರಿ

# ರ್ ಸಾಲಾರ್ ಜಂಗ್

ಜಿ. ಸಿ. ಎಸ್. ಐ.,

ನ ಚರಿತ್ರೆ

ಎಂ. ಎಸ್. ಪುಟ್ಟಣ್ಣ, ಬಿ. ಎ.

ರಚಿಸಿದ್ದು.

---



1917



# PREFACE.

—o—

While expressing my great regret for the frustration of my earnest attempt to write the Life of Mr. C. Rangacharlu, C. I. E., the first and almost the best Dewan of Mysore after Rendition in 1881, Mr. S. Krishna Rau, Assistant Superintendent (Retired) of the Secretariat of the Mysore Government, whose worth, political instincts, and patriotism attracted the special attention of the successive British Residents in Mysore, put into my hands some scraps of published materials containing certain facts during the ministry of Sir Salar Jung of Haidarabad. On a cursory perusal of those valuable records, we both agreed that a life of this distinguished Statesman in one of the Vernaculars (Kannada) of the Country which had the benefit of his administation, might be a useful and interesting reading to the ordinary people and an object lesson to the future Dewans of any Indian State. His remarkable talent for statecraft and true political insight, which eminently deserved the high esteem with which he was regarded by a number of British statesmen, are of no mean order. The princely reception accorded to him in England and other European Countries for the invaluable services rendered by him to the British Government during extremely critical times in India, was so great that it might excite the envy of even the

ruling Princes and Sovereigns from the East. Had he lived a few years longer or had his lot been thrown in more peaceful and favorable times, he would have achieved much more and would have given greater stability for the political affairs of that vast Mussulman state in India and the third great Mussulman power in the world. The mass of ignorance prevailing among the people of that Country, the insubordinate tendency among the servants of the State, the meanest intrigues in the Palace, the consequent unpleasantness between him and his Sovereigns, were enough to worry him. Schemes of reform and transformation of a state of things pure *Mogulai* to meet the modern administrative requirements, taxed his energies not a little. The last not the least was the question of the Restoration of Berar which created considerable anxiety in his latter days as having been the source of undesirable relationship between him and the Government of India. Foreign envy and the local tight-fisted policy, the local pettiness and short sighted baseness made the latter part of his life miserable. Viewed from all standpoints, he was the best, and perhaps the last up to now, of the great ministers that the Indian States ever had in these modern days.

Apart from what could be gathered from the scrap of materials on hand, nothing could be ascertained about his early life and training, and the details of his official career. I am greatly indebted to Mr. S. Krishna Rau for the loan of the materials placed at my diposal. Whatever else may be said of this far-sighted minister,

he was the most faithful servant of his Royal Master. The pith of his whole policy during his latter days was Berar and he had "Berar" engraved as it were on his heart when he died.

BANGALORE CITY,<br>*August 1, 1917.*

**The Author.**

## CONTENTS.

# ಪೀಠಿಕೆ.

---

ನಮ್ಮ ಹಿಂದುಸ್ಥಾನ ದೇಶದಲ್ಲಿ ಎಂಥಾ ಶಕ್ತರಿದ್ದರು ಎಂಬ ವಿಚಾರವನ್ನು ನಾವು ತಿಳಿದುಕೊಳ್ಳುವುದಕ್ಕೆ ಮುಂಚೆ ಅನ್ಯದೇಶೀಯರ ಸಾಮರ್ಥ್ಯವನ್ನು ಉಸಿರು ಬಿಡದೆ ಕೊಂಡಾಡಿಕೊಂಡು, ನಮ್ಮ ರಾಜ್ಯವನ್ನೇ ಅಲಗಳೆಯುವ ಸ್ವಭಾವವು ಈಗಿನ ವಿದ್ಯಾಭ್ಯಾಸಕ್ರಮದಿಂದ ಈಗಿನ ವಿದ್ಯಾಶಾಲೆಗಳಲ್ಲಿ ಹುಟ್ಟಿದ್ದಾಗಿದೆ. ಇಂಗ್ಲಿಷ್ ಭಾಷೆಯನ್ನು ಓದತಕ್ಕ ವಿದ್ಯಾರ್ಥಿಗಳ ಅಭಿಪ್ರಾಯ ಹೇಗಾದರೂ ಇರಲಿ. ಇಂಗ್ಲಿಷ್ ಬಾರದ ಬಾಲಕರೂ ಜನರೂ ಸಾಲಾರಜಂಗನಂಥಾ ಮಹಾಮಂತ್ರಿಯ ಜೀವಮಾನ ಚರಿತ್ರೆಯನ್ನು ಓದುವುದರಿಂದ ಹುಟ್ಟುವ ದೇಶಾಭಿಮಾನವೂ, ವಿವೇಕವೂ, ದೇಶಾಭಿವೃದ್ಧಿಗೆ ಬಹಳ ಅಗತ್ಯವಾದ್ದೆಂದು ತಿಳಿದು ಈ ಚರಿತ್ರೆಯನ್ನು ಬರೆದೆನು. ವಾಚಕರಿಗೆ ಇದು ಸ್ವಲ್ಪವಾಗಿಯಾದರೂ ಉಪಯುಕ್ತವಾದ ಲೇಖನವೆಂದು ತೋರಿದಲ್ಲಿ ನನ್ನ ಶ್ರಮ ಸಾರ್ಥಕವಾಯಿತೆಂದು ತಿಳಿಯುತೇನೆ.

ಪೈಂಗಳ ಸಂ|| ಶ್ರಾವಣ<br>ಶು|| ೧೩ ಬುಧವಾರ,<br>ಬೆಂಗಳೂರು.

ಗ್ರಂಥಕರ್ತ.

# ವಿಷಯಸೂಚಿಕೆ.

---

ಅಧ್ಯಾಯ. ಪುಟ.





ಶ್ರೀ.

ಶ್ರೀ ವಿಶ್ವೇಶ್ವರಾಯನಮಃ.

ಶ್ರೀ ಶಾರದಾಂಬಾಯೈನಮಃ

ಶ್ರೀಲಕ್ಷ್ಮೀನರಸಿಂಹಪ್ರಸನ್ನ.

# ಸರ್ ಸಾಲಾರ್ ಜಂಗ್

## ನ ಚರಿತ್ರೆ.

---

### ೧. ನೇ ಅಧ್ಯಾಯ.

ಹೈದರಾಬಾದು ದೇಶದ ಸ್ವರೂಪ.

ಹಿಂದುಸ್ಥಾನದರಾಜವಾಡೆಗಳಲ್ಲಿ ಹೈದರಾಬಾದು ಬಹುದೊಡ್ಡದಾದ್ದು. ಇದು ನಮ್ಮ ಮೈಸೂರು ಸೀಮೆಗೆ ವಿಸ್ತೀರ್ಣದಲ್ಲಿಯೂ, ಜನಸಂಖ್ಯೆಯಲ್ಲಿಯೂ, ಮೂರರಷ್ಟಿದೆ. ಉತ್ತರದಲ್ಲಿ ಬೊಂಬಾಯಿಇಲಾಖೆ, ಬಿರಾರು, ಮಧ್ಯದೇಶ; ದಕ್ಷಿಣದಲ್ಲಿ ಮದರಾಸು ಇಲಾಖೆ; ಪೂರ್ವದಲ್ಲಿ ಮದರಾಸುಇಲಾಖೆ; ಪಶ್ಚಿಮಕ್ಕೆ ಬೊಂಬಾಯಿ ಇಲಾಖೆ, ಈರೀತಿ ಮೇರೆಗಳನ್ನುಳ್ಳದ್ದಾಗಿದೆ. ಇಲ್ಲಿರುವ ಗಟ್ಟಬೆಟ್ಟಗಳು ಸಾಧಾರಣವಾಗಿವೆ. ಎತ್ತರದಲ್ಲಿ ಹೆಚ್ಚಾಗಿಲ್ಲ. ಗೋದಾವರಿ ಕೃಷ್ಣ ಮತ್ತು ಇವುಗಳ ದೊಡ್ಡಉಪನದಿಗಳಾದ ವೇಣಗಂಗ, ಪೇನಗಂಗ, ಮಂಜೀರ, ತುಂಗಭದ್ರ ಇವೇ ಮೊದಲಾದವು ಈ ದೇಶದಲ್ಲಿ ಅನೇಕವಾಗಿ ಹರಿಯುವವು. ಈ ನದಿಗಳದೆಸೆಯಿಂದಲೂ, ಭೂಮಿಯು ಎರೇನೆಲವಾಗಿರುವುದರಿಂದಲೂ, ದೇಶವು ಬಹು ಫಲಪ್ರದವಾಗಿದೆ.

ಅಕ್ಕಿ, ಗೋಧಿ, ಹತ್ತಿ, ಕಡಲೆ, ಮೊದಲಾದ ವಿಶಿಷ್ಟ ಪದಾರ್ಥಗಳೂ ಬೆಳೆಯುವವು. ಪೂರ್ವಪ್ರಾಂತದಲ್ಲಿ ಕಲ್ಲಿದ್ದಲು, ವಜ್ರ; ಈಶಾನ್ಯದಲ್ಲಿ ಕಬ್ಬಿಣ ಸಿಕ್ಕುವವು. ನಿಸರ್ಗವಾದಭಾಗ್ಯದಲ್ಲಿ ಈ ಸೀಮೆಯು ಯಾವರಾಜ್ಯಕ್ಕೂ ಕಡಮೆಯಾದ್ದಾಗಿಲ್ಲ. ಈ ಸೀಮೆಯ ಪೂರ್ವದಿಕ್ಕಿನಲ್ಲಿ ತೆಲಗನ್ನೂ, ಪಶ್ಚಿಮದಲ್ಲಿ ಮರಾಟೆಯನ್ನೂ, ದಕ್ಷಿಣದಲ್ಲಿ ಕನ್ನಡವನ್ನೂ ಜನರು ಮಾತನಾಡುತಾರೆ.

**ಹಿಂದಿನ ಮುಸಲ್ಮಾನರ ಆಳಿಕೆ.**

ಪೂರ್ವಕಾಲದಲ್ಲಿ ಈ ದೇಶದೊಳು ನಮ್ಮ ಹಿಂದೂ ರಾಜರು ಖ್ಯಾತಿವಂತರಾಗಿ ಆಳುತಾ ಇದ್ದರು. ಅವರೊಳು ಓರಗಲ್ಲಲ್ಲಿದ್ದ ದೊರೆಗಳು ಪ್ರಖ್ಯಾತರು. ಅಲ್ಲಾವುದ್ದೀ ಖಿಲ್ ಜಿಯೂ ಇವನಸೇನಾಪತಿಯಾದ ಮಲ್ಲಿಕಾಫೂರನೂ ಇಲ್ಲಿನ ಪುರಾತನ ಸಂಸ್ಥಾನಗಳನ್ನು ಒಂದೊಂದಾಗಿ ನಾಶಮಾಡಿದ ತರುವಾಯ, ಮುಸಲ್ಮಾನರು ಅಲ್ಲಲ್ಲಿ ಆಕ್ರಮಿಸಿ ದೊರೆಗಳೆನ್ನಿಸಿಕೊಳ್ಳುತಾ ಬಂದರು. ಗುಲ್ ಬರ್ಗಾ ಸಂಸ್ಥಾನದಲ್ಲಿ ಆಳುತಿದ್ದ ಬಹಮನಿದೊರೆಗಳು ಕೇವಲಪ್ರಖ್ಯಾತರು. ಕಾಲಾನುಕಾಲಕ್ಕೆ ಇವರ ರಾಜ್ಯವು ಐದು ಷಾಹಿರಾಜ್ಯಗಳಾದವು. ದಿನಕ್ರಮೇಣ ಅಹಮದ್ ನಗರ ಮೊದಲಾದ ಸಂಸ್ಥಾನದವರು ಅಕ್ಬರನ ದಿವಸದಲ್ಲಿಯೂ, ಬಿಜಾಪೂರ್ ಗೋಲಕೊಂಡ ಮೊದಲಾದ ದೊರೆಗಳು ಔರಂಗಸೇಬನ ದಿವಸದಲ್ಲಿಯೂ ಮೊಗಲಾಯರಿಂದ ಪರಾಜಿತರಾಗಲು, ಈ ರಾಜ್ಯಗಳು ದಿಳ್ಳೀಚಕ್ರಾಧಿಪತ್ಯಕ್ಕೆ ಸೇರಿಹೋದವು.

**ಮೊಗಲಾಯರ ಕಾಲ.**

ದೊರೆಗಳಿಗೆ ರಾಜ್ಯವನ್ನು ಹೆಚ್ಚಾಗಿ ಜೈಸಿಕೊಳ್ಳಬೇಕೆಂಬ ಆಶೆ ಮಾತ್ರ ವಿಶೇಷವಾಗಿರುವುದೇ ಹೊರತು ಅಂಥಾ ರಾಜ್ಯಗಳನ್ನು ಆಳುವುದು ಹೇಗೆ, ಅಲ್ಲಿನ ಪ್ರಜೆಗಳನ್ನು ಕಾಪಾಡುವುದು ಹೇಗೆ ಎಂಬ ಯೋಚನೆಯು ಅವರಿಗೆ ಇರುವುದು ಅಪೂರ್ವ. ಈ ವಿಧವಾದ ಉಪೇಕ್ಷೆಯ ದೆಸೆಯಿಂ

ದಲೂ, ಉತ್ತರದಲ್ಲಿ ಉಂಟಾಗಿದ್ದ ಇತರ ಕಾಟಕಾಯಗಳ ದೆಸೆಯಿಂದಲೂ, ಹೊಸದಾಗಿ ಜೈಸಿ ನಿರ್ಬಾಧಕವಾಗಿ ಮಾಡಿಕೊಂಡ ದಕ್ಷಿಣ ಸೀಮೆಗಳ ಆಳಿಕೆಗೆ ಸರಿಯಾದ ಅಧಿಕಾರಿಯನ್ನು ನೇಮಿಸದಿದ್ದರೆ ಆ ದೇಶ ತಮ್ಮ ವಂಶೀಯರಿಂದಾಗಲಿ, ಇತರ ಶತ್ರುಗಳಿಂದಾಗಲಿ ಆಕ್ರಮಿಸಲ್ಪಟ್ಟು ತನ್ನ ಕೈತಪ್ಪಿ ಹೋದೀತೆಂಬ ಭಯವು ಔರಂಗಸೇಬನಿಗೆ ಉಂಟಾಗಿತ್ತು. ಪರಾಜಿತರಾದ ದೊರೆಗಳ ಸೇನೆಯ್ರವರ ಗಲಾಟೆಯೂ, ಮರಾಟೆಜನರ ಹಾವಳಿಯೂ ದಿನೇದಿನೇ ಅಧಿಕವಾಗುತಾಬಂತು. ಇದರಿಂದ ತುರಕಿ ದೊಡ್ಡಮನುಷ್ಯನಾದ ಚಿನ್‌ಕಿಲಿಚ್‌ಖಾನನು ಬಿಜಾಪುರದಲ್ಲಿ ಅಧಿಕಾರ ಮಾಡಿಕೊಂಡಿರಲ್ಲು ೧೬೯೬ ರಲ್ಲಿ ನೇಮಕವಾದನು. ಈಚಿನ್‌ಕಿಲಿಚ್‌ಖಾನನು ಬೊಖಾರಾಪಟ್ಟಣದ ಖಾಸಿಯಾದ ಆಬಿದ್‌ಕೂಲಿಖಾನನ ಮೊಮ್ಮಗ. ಈ ಆಬಿದ್‌ಕೂಲಿಖಾನನು ೧೬೫೮ರಲ್ಲಿ ದಿಳ್ಳಿಗೆಬಂದು ಔರಂಗಸೇಬನ ಆಸ್ಥಾನದಲ್ಲಿ ಸೇನಾಧಿಕಾರವನ್ನು ಸಂಪಾದಿಸಿದ್ದನು. ಇವನು ೧೬೮೭ ರಲ್ಲಿ ದಿಳ್ಳೀಸೇನೆ ಗೋಲಕೊಂಡಕ್ಕೆ ಮುತ್ತಿಗೇ ಹಾಕಿರುವ ಕಾಲದಲ್ಲಿ ಪೆಟ್ಟುತಗಲಿ ಮೃತನಾದನು.

ದಕ್ಷಿಣ ಸುಬೇದಾರ ಚಿನ್‌ಕಿಲಿಚ್‌ಖಾನ್

ಚಿನ್‌ಕಿಲಿಚ್ಖನು ಶಕ್ತನಾಗಿಯೂ ವಿವೇಕಿಯಾಗಿಯೂ ಇದ್ದುಕೊಂಡು ಜನರಿಗೆ ಬೇಕಾದವನಾಗಿದ್ದ ಕಾರಣ, ಫರುಕ್‌ಸಿಯರೆಂಬ ದಿಳ್ಳೀಚಕ್ರವರ್ತಿಯು ೧೭೧೩ ರಲ್ಲಿ ಇವನನ್ನು ದಕ್ಷಿಣಗೆ ಸುಬೇದಾರನನ್ನಾಗಿ ನೇಮಿಸಿ ಆತನಿಗೆ ನಿಸಾಮುಲ್‌ಮುಲ್ಕ್‌ಆಸಫ್‌ಜಾ ಎಂಬ ಬಿರುದನ್ನು ಕೊಟ್ಟನು. ಈ ನಿಸಾಮುಲ್ ಮುಲ್ಕನು ದಿಳಿಯಲ್ಲಿ ಹುಟ್ಟಿಕೊಂಡಿದ್ದ ಕಕ್ಷಿಗಳ ಸಂಗಡ ಸೇರದೆ ಅತಿಜಾಗರೂಕತೆಯಿಂದ ಇಂಗಡವಾಗಿರುತಾ ಹೈದರಾಬಾದಿನಲ್ಲಿ ಜಿತವಾಗಿನೆಲೆ

ಗೊಂಡನು ; ಮತ್ತು ದಿಳ್ಳಿಯಲ್ಲಿದ್ದ ತನ್ನ ಶತ್ರುಗಳು ಎರಡು ಸಾರಿ ದಂಡೆತ್ತಿ ಒಂದರೂ ಅವರನ್ನು ಸೋಲಿಸಿ ಅವರ ಕೈಲಿ ಸಿಕ್ಕಿ ನರಳುತಿದ್ದ ಚಕ್ರವರ್ತಿಯಾದ ಮೊಹಮ್ಮದ್ ಷಾನಿಗೆ ಅವರು ಉಂಟುಮಾಡಿದ್ದ ತೊಂದರೆಯನ್ನು ತಪ್ಪಿಸಿದನು. ತರುವಾಯ ಈ ನಿಸಾಮುಲ್‌ಮುಲ್ಕ್‌ನಿಗೆ ದಿಳ್ಳಿಯಲ್ಲಿ ವಸೀರ ಕೆಲಸವಾಯಿತು. ಈ ಉದ್ಯೋಗವು ಇಷ್ಟವಿಲ್ಲದೆ ಸ್ ೧೭೨೩ ರಲ್ಲಿ ಅದಕ್ಕೆ ರಾಜೀನಾಮೆ ಕೊಟ್ಟು ದರ್ಖನಲ್ಲಿ ಸುಬೇದಾರ್ ಅಧಿಕಾರಿಯಾಗಿದ್ದವನ ಮೇಲೆ ಯುದ್ಧಮಾಡಿದನು. ಆ ಅಧಿಕಾರಿಯು ಯುದ್ಧದಲ್ಲಿ ಸತ್ತು ಹೋದನು. ಆಸಫ್‌ಜಾನಿಗೆ ಜಯವಾಗಿ ದರ್ಖರಾಜ್ಯವೆಲ್ಲಾ ಇವನ ಕೈವಶವಾಯಿತು.

ಮರಾಟೆಯವರು ದಿಳ್ಳಿಗೆ ಸೇರಿದ ಅನೇಕ ಸೀಮೆಗಳನ್ನು ಗೆದ್ದುಕೊಂಡು ಮುಂದಕ್ಕೂ ಹೆಚ್ಚಾದ ಹಾವಳಿಯನ್ನು ಮಾಡುತಾಬಂದರು. ಚಿರ್‌ಕಿಲಿಚ್‌ಖಾನನು ೧೭೩೮ ರಲ್ಲಿ ಈ ಜನರಮೇಲೆ ಸೇನೆಯೊಡನೆ ಹೊರಟನು. ಈ ಎರಡು ಸೇನೆಗೂ ಭೂಪಾಳದ ಹತ್ತಿರ ಕದನ ಕೈಗಟ್ಟಿ ಮುಸಲ್ಮಾನರಿಗೆ ಸೋಲಾಯಿತು. ನರ್ಮದ ಮತ್ತು ಚಂಬಲ್ ನದಿಗಳ ಮಧ್ಯೆ ಇರುವ ದೇಶವೆಲ್ಲಾ ಮರಾಟೆಯವರಿಗೆ ಸೇರಿಹೋಯಿತು. ಮಾರನೇ ವರುಷದಲ್ಲಿ ನಾದಿರಷಹನು ಹಿಂದುಸ್ಥಾನಕ್ಕೆ ಬಂದು ದಿಳ್ಳಿಗೆ ಮುತ್ತಿಗೆಹಾಕಲು, ಚಿರ್‌ಕಿಲಿಚ್‌ಖಾನನು ದಿಳ್ಳೀ ಸೇನೆಯೊಡನೆ ತನ್ನ ದಂಡನ್ನು ತೆಗೆದುಕೊಂಡು ಆ ಶತ್ರುವಿನ ಮೇಲೆ ಹೊರಟನು. ಆದರೆ ಇವನಾಗಲಿ, ದಿಳ್ಳೀ ಚಕ್ರವರ್ತಿಯಾಗಲಿ ನಾದಿರನ ಪರಾಕ್ರಮಕ್ಕೂ ಅವನ ಮಹಾಕ್ರೌರ್ಯಕ್ಕೂ ಎದುರಾಗಿ ನಿಲ್ಲಲಾರದೇ ಹೋದರು. ನಿಸಾಮುಲ್ ಮುಲ್ಕನು ೧೭೪೮ ರಲ್ಲಿ ಈ ಲೋಕವನ್ನು ಬಿಟ್ಟನು. ಹೈದರಾಬಾದ್ ಸಂಸ್ಥಾನದ ನಿಸಾಂ ದೊರೆಗಳ ವಂಶಕ್ಕೆ ಈತ ನೆ

ಮರಾಟೆಯವರು

ಮೂಲಪುರುಷನು. ದಖ್ಖಣರಾಜ್ಯವು ನಾಮಮಾತ್ರಕ್ಕೆ ದಿಳ್ಳೀಚಕ್ರವರ್ತಿಗಳಿಗೆ ಅಧೀನವೆನ್ನಿಸಿಕೊಂಡಿತ್ತೇ ಹೊರತು ಇದು ನಿಜವಾಗಿ ಸ್ವತಂತ್ರರಾಜ್ಯವಾಗಿಯೇ ಆಗಿತ್ತು.

ನಿಸಾಮನ ವಂಶೀಯರ ಜಗಳ

ನಿಸಾಮನ ಮರಣಾನಂತರ ಆ ಸೀಮೆಯ ಆಳಿಕೆಗೆ ಯಾರು ನೇಮಿಸಲ್ಪಡಬೇಕೆಂಬ ವಿಚಾರದಲ್ಲಿ ವಿವಾದ ಹುಟ್ಟಿತು. ಇತರರು ಯಾರನ್ನೂ ನೇಮಿಸುವ ಮಟ್ಟಿನ ಶಕ್ತಿಯು ದಿಳ್ಳಿಯುವರಿಗೆ ಇರಲಿಲ್ಲ. ನಿಸಾಮನ ವಂಶೀಯರು ಇದನ್ನು ತಮ್ಮೊಳಗೇ ವ್ಯವಸ್ಥೆ ಮಾಡಿಕೊಳ್ಳಬೇಕಾಗಿ ಬಂತು. ನಿಸಾಮನ ಎರಡನೇಮಗನಾದ ನಾಸರ್ ಜಂಗನಿಗೂ ಹಿರೀಮಗನಮಗನಾದ ಮುಸಫರ್ ಜಂಗನಿಗೂ ವಿವಾದ ಹುಟ್ಟಿ ಇವರಿಬ್ಬರೂ ಪರಸ್ಪರ ಮಾಡಿದ ಫಿತೂರಿಗಳಿಂದ ಮರಣಹೊಂದಿದರು. ನಿಸಾಮನ ಇನ್ನೊಬ್ಬ ಮಗ ಸಲಾಬತ್ ಜಂಗನಿಗೆ ಅಧಿಕಾರಬಂತು. ಇಂಗ್ಲಿಷರು ೧೭೫೯ ರಲ್ಲಿ ಇವನೊಡನೆ ಈ ಸಂಸ್ಥಾನದ ವಿಷಯವಾಗಿ ಮೊಟ್ಟಮೊದಲು ಕರಾರನ್ನು ಮಾಡಿಕೊಂಡರು. ಈಚೆಗೆ ಈ ಕರಾರು ೧೦-೧೨ ಸಾರಿ ಹೊಸದಾಗುತ್ತಲೇ ಬಂತು. ಈ ತಹಾನಾಮೆ ಹೊಸದಾದಾಗಲೆಲ್ಲಾ ಹೊಸ ಷರತ್ತುಗಳು ಸೇರುತ್ತಲೇ ಬಂದವು. ಕಡೆಗೆ ನಿಸಾಮನು ಸ್ವತಂತ್ರಾಧಿಕಾರವನ್ನು ಬಿಟ್ಟು ಇಂಗ್ಲಿಷ್ ಸರ್ಕಾರಕ್ಕೆ ಅಧೀನನೆಂಬ ಪದವಿಯನ್ನು ಹೊಂದಿದಂತಾಯಿತು.

ಮೀರ್ ಆಲಂ

ಈತಹಾನಾಮೆಗಳ ಪ್ರಕಾರ ಇಂಗ್ಲಿಷರು ತಮ್ಮ ಶತ್ರುಗಳ ಮೇಲೆ ಮಾಡಿದ ಹಲವು ಯುದ್ಧಗಳಿಗೆ ನಿಸಾಮನ ಸೇನೆಯು ಇಂಗ್ಲಿಷರ ಸಹಾಯಕ್ಕಾಗಿ ಹೋಗಿತ್ತು. ಕ್ರಮವಾಗಿ ತಬೀಯತ್ತಾಗದೇ ಇದ್ದಲ್ಲಿ ಈಸೇನೆಯು ಉಪಯೋಗಕ್ಕೆ

ಬರುವುದಿಲ್ಲವೆಂದು ಮೊದಲನೇ ಮರಾಟೇಯುದ್ಧದಲ್ಲಿ ಇಂಗ್ಲಿಷ್ ಸರದಾರರು ತಿಳಿದುಕೊಂಡರಂತೆ. ಆದರೂ ಇದನ್ನು ಕೂಡಲೆ ಪ್ರಕಾಶಮಾಡಲಿಲ್ಲ. ಇಂಗ್ಲಿಷರು ಕೊನೇಸಾರಿ ಮೈಸೂರಮೇಲೆ ದಂಡೆತ್ತಿ ಬಂದು ಶ್ರೀರಂಗಪಟ್ಟಣವನ್ನು ಹಲ್ಲಾಮಾಡಿ ಹಿಡಿದುಕೊಂಡಾಗ ಇಂಗ್ಲಿಷಸೇನೆ ಹೈದ್ರಾಬಾದುಸೇನೆ ಮರಾಟೇಸೇನೆ ಇವು ಮೂರೂ ಸೇರಿದ್ದವು. ಆಗ ಹೈದರ್ರಾಬಾದಿನ ದಂಡಿಗೆ ಮೀರ್ ಆಲಂ ಎಂಬ ಸರದಾರನು ಮಹಾಸೇನಾಪತಿಯಾಗಿ ಬಂದಿದ್ದನು. ಶ್ರೀರಂಗಪಟ್ಟಣದಲ್ಲಿ ಒಂದು ಬತೇರಿಗೆ ಈಗಲೂ ಆಲಂಬತೇರಿ ಎಂದು ಹೆಸರಿದೆ. ಮೈಸೂರು ಸರ್ಕಾರದವರು ಇಂಗ್ಲಿಷರಲ್ಲಿ ತಮಗಿರುವ ವಿಶ್ವಾಸವನ್ನು ಬೆಂಗಳೂರು ಮೈಸೂರು ಶ್ರೀರಂಗಪಟ್ಟಣ ಮೊದಲಾದ ಸ್ಥಳಗಳಲ್ಲಿದ್ದ ಕೋಟೆಗಳನ್ನು ನಾಶಮಾಡುವುದರ ಮೂಲಕ ಅಥವಾ ವಿರೂಪಮಾಡುವುದರ ಮೂಲಕ ತೋರ್ಪಡಿಸುತಾ ಇದ್ದರೂ, ಹಳೇಕಟ್ಟಡಗಳು ಯಾವುದಾದರೂ ಸರಿಯೆ ವಿರೂಪಮಾಡಿಯೋ ನಾಶಮಾಡಿಯೋ ಹಿಂದಿನ ಐಶ್ವರ್ಯದ ಸ್ಮರಣೆಯನ್ನು ಜನರು ಮರೆತು ಬಿಡುವಂತೆ ಬೇಕಾದ್ದನ್ನೆಲ್ಲಾ ಮಾಡುತಿದ್ದರೂ, ಈ ಆಲಂಬತೇರಿ ಮಾತ್ರ ಯಿಂಜನೀರ್ ಇಲಾಖೆಯವರ ಹಾರೆಯ ಮತ್ತು ಗುದ್ದಲಿಯ ಸೋಂಕಿಗೆ ಇನ್ನೂ ಬಾರದೇ ಇರುವುದೇನೊ ಆಶ್ಚರ್ಯ.

**ಟೀಪುವಿನಸೀಮೆಯ ವಿಭಾಗ**

ಶ್ರೀರಂಗಪಟ್ಟಣವನ್ನು ತೆಗೆದುಕೊಂಡು ಟೀಪುಸುಲ್ತಾನನ ರಾಜ್ಯವನ್ನು ಹಂಚಿಕೊಳ್ಳುವಾಗ್ಗೆ ಈಗಿನ ಮೈಸೂರು ಸೀಮೆಯನ್ನು ಪೂರ್ವದ ದೊರೆಗಳ ವಂಶೀಯರಾದ ಶ್ರೀಕೃಷ್ಣರಾಜ ಒಡಯರಿಗೆ ಕೊಟ್ಟು ಒಂದು ಪುರಾತನ ರಾಜವಾಡೆಯನ್ನು ನಿಲ್ಲಿಸಿದರು. ಬಳ್ಳಾರಿ ಕಡಪ ಮೊದಲಾದ ಪ್ರಾಂತವು ೧೮೦೦ ರಲ್ಲಿ ಹೈದರಾಬಾದಿನವರ ಪಾಲಿಗೆ ಬಂತು.

ನಿಸಾಮನು ಇಂಗ್ಲಿಷರ ಸಹಾಯವನ್ನು ಕೇಳಲು ಕಾರಣ

ಶ್ರೀರಂಗಪಟ್ಟಣವನ್ನು ಜೈಸಿ ಮೈಸೂರ ಹುಲಿ ಎನಿಸಿಕೊಂಡಿದ್ದ ಟೀಪುವಿನ ದರಬಾರನ್ನು ನಾಶಮಾಡಿದ ಕಾರಣ ದಕ್ಷಿಣದೇಶವೆಲ್ಲಾ ಇಂಗ್ಲಿಷರ ಸ್ವಾಧೀನಕ್ಕೆ ಬಂತು. ಬಹುದಿವಸದಿಂದಲೂ ಯಾರಿಗೂ ಆಸ್ಪದ ವಿಲ್ಲದೆ ಅತ್ಯಂತ ಪ್ರಬಲನಾಗಿದ್ದ ಟೀಪುವಿನ ಭಯವು ಇವನ ಶತ್ರುಗಳಿಗೆಲ್ಲಾ ತಪ್ಪಿತು. ಇಂಥವನನ್ನು ಜೈಸಿದ ಬ್ರಿಟಿಷರ ಪರಾಕ್ರಮದಲ್ಲಿಯೂ ಸಾಮರ್ಥ್ಯದಲ್ಲಿಯೂ ಹಿಂದುಸ್ಥಾನಿನ ದೊರೆಗಳಿಗೂ ಮತ್ತು ಜನರಿಗೂ ಗೌರವಹೆಚ್ಚಿತು ಪೂರ್ವದಲ್ಲಿ ಪ್ರಬಲವಾಗಿದ್ದ ದಿಳ್ಳೀ ಚಕ್ರವರ್ತಿಯ ಪದವಿಯು ನಾಮಮಾತ್ರವಾಗಿತ್ತು. ದಿಕ್ಕು ದಿಕ್ಕಿನಲ್ಲಿಯೂ ದೇಶಗಳನ್ನು ಆಕ್ರಮಿಸಿಕೊಳ್ಳುತಾ ಇದ್ದ ರಾಜರುಗಳಿಗೆ ಸುತ್ತಲೂ ಇರುವ ರಾಜ್ಯದವರ ಭಯವು ವಿಶೇಷವಾಗಿತ್ತು. ಅತ್ಯಂತ ಪ್ರಬಲ ದಶೆಯಲ್ಲಿದ್ದ ಪೂನೇ ಸಂಸ್ಥಾನದ ಭೀತಿಯು ಯಾರಿಗೂ ತಪ್ಪಿರಲಿಲ್ಲ. ದಿಳ್ಳಿಯ ಚಕ್ರಾಧೀಶ್ವರರನ್ನು ಕೂಡ ತಮ್ಮ ಕೈವಶದಲ್ಲಿರಿಸಿಕೊಂಡಿದ್ದ ಪೇಶ್ವೆಗಳಿಗೆ ಇತರ ಪ್ರತಿ ರಾಜರು ಗಣನೆಯಲ್ಲಿರಲಿಲ್ಲ. ಹೈದರಾಬಾದಿನವರನ್ನು ಕೂಡ ಕೆಣಕಿ ಅವರನ್ನು ಕರ್ಡ್ಲದಲ್ಲಿ ೧೭೯೫ ರಲ್ಲಿ ಮರಾಟೆಯವರು ಸೋಲಿಸಿದರು. ಶ್ರೀರಂಗಪಟ್ಟಣವನ್ನು ಇಂಗ್ಲಿಷರು ತೆಗೆದುಕೊಂಡ ತರವಾಯವೂ ಪೂನೆ ಸಂಸ್ಥಾನದ ಮುಖ್ಯ ಮಂತ್ರಿಯಾದ ನಾನಾ ಫರ್ನವೀಸನು ಇಂಗ್ಲಿಷರನ್ನು ಲಕ್ಷ್ಯದಲ್ಲಿಡದೆ ಉತ್ತರದಲ್ಲಿ ಹಿಮಾಚಲದವರೆಗೆ ವಿಸ್ತರಿಸಿದಂತೆಯೇ ದಕ್ಷಿಣದಲ್ಲಿಯೂ ತಮ್ಮ ಅಧಿಕಾರವನ್ನು ಸ್ಥಾಪನೆ ಮಾಡುವುದರಲ್ಲಿ ಉದ್ಯುಕ್ತನಾಗಿದ್ದನು. ಇದು ಹೈದರಾಬಾದಿನವರಿಗೆ ಚೆನ್ನಾಗಿ ತಿಳಿದಿತ್ತು. ಎಂದಾದರೂ ಪೂನೆಸಂಸ್ಥಾನದವರು ತಮ್ಮ ರಾಜ್ಯದಮೇಲೆ ಬರುವುದು ಖಂಡಿತವೆಂದು ನಿಸಾಮನು ಚೆನ್ನಾ

ಗಿ ಗೊತ್ತುಮಾಡಿಕೊಂಡಿದ್ದನು. ಇದೂ ಅಲ್ಲದೆ ದರ್ಖನಲ್ಲಿ ಮುಸಲ್ಮಾನರು ೩೦೦-೪೦೦ ವರುಷಗಳಿಂದ ಇದ್ದಾಗ್ಯೂ ಮೊಗಲಾಯರಿಗೆ ಈ ರಾಜ್ಯವೆಲ್ಲಾ ಕೈವಶವಾಗಿ ಬಂದನೂರು ವರುಷ ಪೂರ್ತಿಯಾಗಿ ಆಗಿರಲಿಲ್ಲ. ಹಿಂದಿದ್ದ ಬಹಮನಿರಾಜ್ಯ ಮತ್ತು ಐದು ಷಾಹಿ ರಾಜ್ಯಗಳೂ ಸಹಾ ಹೋದಾಗ್ಯು ಅಲ್ಲಿಗೆ ಸೇರಿದ ದಖನಿ ತುರುಕರು ಮೊಗಲಾಯರನ್ನು ಯಾವಾಗಲೂ ಮಿತ್ರಭಾವದಲ್ಲಿಯೇ ಕಾಣುತಿರಲಿಲ್ಲ. ಕಡೆಗೆ ಕೆಲವು ಮೊಗಲರು ಇಲ್ಲಿ ಬಂದು ಸೇರುತಾ ಇದ್ದಾಗ್ಯೂ ಅವರಿಗೂ ಕೂಡ ಸ್ವಲ್ಪಕಾಲವಿದ್ದು ಓಡಿಹೋಗುತಾ ಇದ್ದ ಮೊಗಲ್ ಅಧಿಕಾರಿಗಳಲ್ಲಿ ಗೌರವವಿರುತಿರಲಿಲ್ಲ. ಚಿಕಿಲಿಚ್‌ಖಾನನು ಹೊಸದಾಗಿ ಹೈದರಾಬಾದಿಗೆ ಅಧಿಪತಿಯಾಗಿ ಸ್ವಲ್ಪ ದಿವಸವೇ ಆಗಿತ್ತು. ಇವನು ಬೇರೂರಿ ರಾಜ್ಯದಲ್ಲಿ ಚೆನ್ನಾಗಿ ನಿಂತಿರಲಿಲ್ಲ, ಹಿಂದಿನ ನವಾಬರುಗಳಲ್ಲಿದ್ದ ಸೇನೆಯವರು ಕೆಲಸವಿಲ್ಲದೆ ಅಲೆಯುತಾ ಸಮಯ ಸಿಕ್ಕೀತೆ ಎಂದು ಕಾದು ಕೊಂಡಿದ್ದರು. ಅಣ್ಣನಾದ ಸಲಾಬತ್ತು ಜಂಗನನ್ನು ಉಚ್ಚಾಟನೆ ಮಾಡಿ ತಾನು ಪಟ್ಟಕ್ಕೆ ಬಂದಿದ್ದ ನಿಜಾಮಲ್ಲಿಯು ಸುಮಾರು ನಲವತ್ತು ವರುಷವಾದಾಗ್ಯೂ, ರಾಜ್ಯಕ್ಕೆ ಇರುವ ಉಪಹತಿಗಳ ಭಯತಪ್ಪಿರಲಿಲ್ಲ. ಆದಕಾರಣ ಎಲ್ಲಾ ಭಾಗದಲ್ಲಿಯೂ ಜಯಶೀಲರಾಗಿ ಸಮರ್ಥರೆನಿಸಿಕೊಂಡಿದ್ದ ಇಂಗ್ಲಿಷರ ಸ್ನೇಹವನ್ನು ಬಲಮಾಡಿಕೊಳ್ಳಲು ನಿಜಾಮನು ಆತುರನಾಗಿದ್ದು ಬ್ರಿಟಿಷ್ ಜನರೊಡನೆ ೧೮೦೦ ರಲ್ಲಿ ಕರಾರನ್ನು ಮಾಡಿಕೊಂಡನು. ಹಿಂದೆ ಆಗಾಗ್ಗೆ ನಡೆದಿದ್ದ ಕರಾರುಗಳ ಆಧಾರದಮೇಲೆ ಕೆಲವು ಹೊಸ ಸಂಗತಿಗಳನ್ನು ಸೇರಿಸಿ ನಿಜಾಮನು ಈಗ ಮಾಡಿಕೊಂಡ ತಹಾನಾಮೆ ಹೇಗೆಂದರೆ:

ಇಂಗ್ಲಿಷರ ಸಬ್ ಸಿಡಿಯರಿ ಕರಾರು

೧. ಇಂಗ್ಲಿಷರು ಹೈದರಾಬಾದಿನಲ್ಲಿ ೮ ಪಟಾಲಂ ಸಿಪಾಯಿಗಳು, ೨ ರೆಜಿಮೆಂಟು ಕುದುರೆಗಳು, ಇದಕ್ಕೆ ಬೇಕಾಗುವ ಫಿರಂಗಿಗಳು, ಒಟ್ಟು ೧೦,೬೮೮ ಸಂಖ್ಯೆಯುಳ್ಳ ಕುಂಪಣೀ ಸರ್ಕಾರದವರ ಸೇನೆಯನ್ನು ಹೈದರಾಬಾದಿನಲ್ಲಿ ಇಂಗ್ಲಿಷರು ಇಡ

ತಕ್ಕದ್ದು. ಅದರ ವೆಚ್ಚವನ್ನು ನಿಸಾಮ ಕೊಡತಕ್ಕದ್ದು;

೨. ಇಂಗ್ಲಿಷ್ ಸರ್ಕಾರದವರು ನಿಸಾಮನಿಗೆ ಇತರ ಯಾವ ಶತ್ರುಗಳ ಬಾಧೆಯೂ ಇಲ್ಲದ ಹಾಗೂ ಅವನ ಅಧಿಕಾರಕ್ಕೆ ಯಾ ವಚ್ಯುತಿಯೂ ಬಾರದಹಾಗೂ ಬಂದೋಬಸ್ತಿನಿಂದ ನೋಡಿಕೊಳ್ಳತಕ್ಕದ್ದು;

೩. ಯುದ್ಧದ ಪ್ರಮೇಯಬಂದಾಗ ನಿಸಾಮನು ೬೦೦೦ ಬಾರು, ೯೦೦೦ ಕುದುರೆ, ಅದಕ್ಕೆ ತಕ್ಕಷ್ಟು ಫಿರಂಗಿ ಇವುಗಳೊಡನೆ ಕಂಪನಿ ಸೇನೆಗೆ ಸಹಾಯ ಮಾಡಬೇಕಲ್ಲದೆ ತನ್ನ ರಾಜ್ಯದಲ್ಲಿರುವ ವಿಶಿಷ್ಟ ಸೇನೆಯನ್ನೂ ಜಾಗ್ರತೆಯಿಂದ ಯುದ್ಧಕ್ಕೆ ಸಿದ್ಧ ಮಾಡಬೇಕು;

೪. ನಿಸಾಮನು ಇತರ ರಾಜವಾಡೆಯವರ ಸಂಗಡ ರಾಜಕೀಯವಾದ ಯಾವ ಕರಾರನ್ನೂ ಮಾಡಿಕೊಳ್ಳಕೂಡದು;

೫. ಬ್ರಿಟಿಷ್ ಸರ್ಕಾರದವರನ್ನು ಸಮಸ್ತವಾದ ವಿವಾದಗಳಲ್ಲಿಯೂ ಮಾಧ್ಯಸ್ಥಕ್ಕೆ ಇಟ್ಟುಕೊಳ್ಳಬೇಕು ;

೬. ಕಂಪನಿ ಸರ್ಕಾರದವರ ತಿಳುವಳಿಕೆ ಮತ್ತು ಸಮ್ಮತಿ ಇಲ್ಲದೆ ನಿಸಾಮನು ಯಾವ ಇತರ ಯೂರೋಪು ದೇಶೀಯರನ್ನೂ ತನ್ನ ಚಾಕರಿಯಲ್ಲಿರಿಸಿಕೊಳ್ಳಕೂಡದು.

೭. ನಿಸಾಮನ ಗೃಹಕೃತ್ಯಕ್ಕೆ ಸೇರಿದ ಸಂಬಂಧಿಗಳಲ್ಲಿ, ಅವನ ಪ್ರಜೆಗಳಲ್ಲಿ, ಮತ್ತು ಚಾಕರರಲ್ಲಿ ಯಾವ ವಿವಾದ ಬಂದರೂ ಅದಕ್ಕೆ ಕಂಪನಿ ಸರ್ಕಾರದವರು ಪ್ರವೇಶಮಾಡಕೂಡದು

ಈ ಮೇಲೆ ಕಂಡ ಅರ್ಥಕ್ಕೆ ನಿಸಾಮನಿಗೂ ಕಂಪನಿ ಸರ್ಕಾರದವರಿಗೂ ಕರಾರಾಯಿತು. ಇದಕ್ಕೆ ಸಬ್ ಸಿಡಿಯರಿಕರಾರೆಂದು ಹೆಸರು. ಇಂಥಾ ತಹಾನಾಮೆಯನ್ನು ಇಂಗ್ಲಿಷರೊಡನೆ ಮಾಡಿಕೊಳ್ಳುವುದಕ್ಕೆ ಈ ದೇಶದಲ್ಲಿ ಇದೇ ಮೊದಲು. ನಿಸಾಮನೇ ಮೊದಲು ಇದಕ್ಕೆ ಪಾಯಾ ಹಾಕಿದನು. ಇತರ ರಾಜವಾಡೆಯವರೂ ಇದರಂತೆ ಆಚರಣೆಯಲ್ಲಿ ತಂದರು. ಆಗ ಇಂಗ್ಲಿಷರ ಅಧಿಕಾರವು ಅಷ್ಟು ಬಲವಾಗಿರಲಿಲ್ಲ. ನಿಸಾಮನ ಸ್ಥಿತಿಯು ಆಗ ಅಷ್ಟು ಹೀನವಾಗಿ ಇರಲಿಲ್ಲ. ಅದಾಗ್ಯೂ ಇಂಥಾ ಕರಾರಿಗೆ ಒಪ್ಪಿಕೊಂಡಾರಭ ಇಂಗ್ಲಿಷರ ಸಾರ್ವಭೌಮತ್ವವನ್ನು ಈ ರಾಜರುಗಳೆಲ್ಲರೂ ಒಪ್ಪಿಕೊಂಡಹಾಗಾಯಿತು. ಇದೆಲ್ಲಾ ಇಂಗ್ಲಿಷರ ಏಳಿಗೆಗೆ ಸಹಕಾರಿಯಾಯಿತು.

ಕರಾರಿನಂತೆ ನಿಸಾಮನ ಸಹಾಯ

ಮೇಲೆ ಹೇಳಿದ ಕೌಲಿನಂತೆ ನಿಸಾಮನು ಇಂಗ್ಲಿಷರಿಗೆ ಬೇಕಬೇಕಾದಾಗ ತನ್ನ ಸೇನೆಯೊಡನೆ ಸಹಾಯ ಮಾಡಿದನು. ಸರ್ ೧೮೦೩-೪ ರಲ್ಲಿನಡೆದ ಮರಾಟೆ ಯುದ್ಧದಲ್ಲಿಯೂ, ಕಟ್ಟಕಡೆಯಲ್ಲಿ ಪುನೇರಾಜ್ಯ ಹೋಗಿ ಪೇಶ್ವೆ ಬಾಜಿರಾಯನಿಗೆ ಕೈಸೆರೆ ಪ್ರಾಪ್ತವಾದಾಗಲೂ, ನಿಸಾಮನ ಸೇನೆಯು ಇಂಗ್ಲಿಷರ ದಂಡಿನೊಡನೆ ಸೇರಿಕೊಂಡೇ ಇತ್ತು. ಆ ತರುವಾಯ ಹೈದರಾಬಾದಿನ ದಂಡು ಇಂಗ್ಲಿಷರ ಜೊತೆಗೆ ವಿಶೇಷವಾಗಿ ಸೇರಲಿಲ್ಲ. ಅಸಹಾಯರಾಗಿ ಸ್ವತಂತ್ರಿಸಿ ಶತ್ರುಗಳನ್ನು ಎದುರಿಸಿ ಘೋರವಾದ ಯುದ್ಧಗಳನ್ನು ಮಾಡುವ ಮಟ್ಟಿನ ಸಾಮರ್ಥ್ಯವು ಕಂಪೆನಿ ಸೇನೆಗೆ ಉಂಟಾಗಿತ್ತು.

ಹೀಗಿರಲಾಗಿ ಸನ್ ೧೮೪೮ ರಲ್ಲಿ ಡಾಲ್ ಹೂಸಿ ಪ್ರಭುವಿಗೆ ಗೌವರ್ನರ್ ಜನರಲ್ ಕೆಲಸವಾಯಿತು. ಇಂಗ್ಲಿಷ್ ಸರ್ಕಾರದವರಿಗೂ ಹೈದರಾಬಾದಿನವರಿಗೂ ಅದುವರೆಗೆ ಹಣಕಾಸಿನ ವಿಚಾರದಲ್ಲಿ ಲೆಕ್ಕಾಚಾರವಾಗಿ ನಿಸಾಮನಿಂದ ಇಂಗ್ಲಿಷ್ ಸರ್ಕಾರಕ್ಕೆ ಭಾರಿಹಣ ಬರಬೇಕೆಂದು ನಿಗದಿಮಾಡಿದರು. ಸನ್ ೧೮೫೩ ರಲ್ಲಿ ನಡೆದ ಒಂದು ಹೊಸ ಕರಾರಿನಂತೆ ನಿಸಾಮನು ಇಂಗ್ಲಿಷಿನವರ ಸಹಾಯಕ್ಕಾಗಿ ಇಡಬೇಕಾಗಿದ ಕಂಟಿಂಜಂಟ್ ಎಂದರೆ ಸಹಾಯಸೇನೆಯು ಬದಲಾವಣೆಯನ್ನು ಹೊಂದಿತು. ಪಾಯಿದಳ ೫೦೦೦, ಕುದುರೆ ೨೦೦೦, ಇದಕ್ಕೆ ತಕ್ಕಷ್ಟು ಫಿರಂಗಿ, ಇಷ್ಟನ್ನು ನಿಸಾಮನು ಇಟ್ಟರೆ ಸಾಕೆಂತಲೂ, ಇದರ ಅಧಿಕಾರಿಗಳೆಲ್ಲಾ ಬ್ರಿಟಿಷ್ ಸರದಾರರೇ ಆಗಿರಬೇಕೆಂತಲೂ, ಈ ಕಂಟಿಂಜಂಟು ಸೇನೆಯು ಹೈದರಾಬಾದು ರೆಸಿಡೆಂಟರ ಅಪ್ಪಣೆಗೆ ಒಳಪಟ್ಟಿರಬೇಕೆಂತಲೂ, ಸಬ್‍ಸಿಡಿಯರಿಸೇನೆ ಕಂಟಿಂಜಂಟು ಸೇನೆ ಇವು ಎರಡು ಹೊರತು ಇನ್ನು ಯಾವ ಸೇನೆಯನ್ನೂ ನಿಸಾಮನು ಒದಗಿಸಬೇಕಾದ್ದಿಲ್ಲವೆಂತಲೂ ಕರಾರಾಯಿತು. ಆದರೆ ಈ ಕಂಟಿಂಜಂಟು ಸೇನೆಯು ದಿನಕ್ರಮೇಣ ಹೆಚ್ಚಿ ಸುಮಾರು ೧೦,೦೦೦ ರದವರೆಗೆ ಏರಿತು. ಇದರ ಖರ್ಚು ವರುಷಕ್ಕೆ ನಲವತ್ತು ಲಕ್ಷಕ್ಕೆ ಹೆಚ್ಚಾಗುತ್ತಾಬಂತು. ಕಾಲ ಕಾಲಕ್ಕೆ ಕೊಡಲು ಅನುಕೂಲ ವಿಲ್ಲದೆ ಹಣ ಸ್ವಲ್ಪವಾಗಿ ಬಾಕಿ ನಿಲ್ಲುತಾಬಂತು. ಸನ್ ೧೮೫೦ರಲ್ಲಿ ಈ ಸಾಲವು ೭೫|| ಲಕ್ಷ ರೂಪಾಯಿಯಾಗಿ ನಿಸಾಮನಿಂದ ಬ್ರಿಟಿಷ್ ಸರ್ಕಾರಕೆ ಕೊಡಬೇಕಾಗಿ ಬಂತು.

ಡಾಲ್‍ಹೂಸಿಯ ಕಾಠಿಣ್ಯ

ಬಿರಾರು ಮುಂ ತಾದ್ದನ್ನು ಇಂಗ್ಲಿಷರಿಗೆ ಭೋಗ್ಯಕ್ಕೆ ಬಿಟ್ಟದ್ದು

ಈ ಸಾಲವನ್ನು ಇಳಿಭೋಗ್ಯರೀತ್ಯಾ ತೀರಿಸಿ ಕೊಳ್ಳುವುದಕ್ಕೂ ಮತ್ತು ಸಹಾಯ ಸೇನೆಯ ಸಂಬಳಕ್ಕಾಗಿ ವರುಷ ಒಂದಕ್ಕೆ ೪೦ ಲಕ್ಷ ರೂಪಾಯಿ ಕೊಡವುದಕ್ಕೂ ನಿಸಾಂ ಸರ್ಕಾರದಿಂದ ಕೆಲವು ಸೀಮೆಯನ್ನು ಬ್ರಿಟಿಷ್ ಸರ್ಕಾರದವರಿಗೆ ಬಿಟ್ಟು ಕೊಡಬೇಕೆಂತ ಡಾಲ್ ಹೂಸಿಯ ರಾಜತಂತ್ರದಿಂದ ನಿಷ್ಕರ್ಷೆಯಾಯಿತು. ಇದರಂತೆ ಉತ್ತರದಲ್ಲಿ ಬೀರಾರು, ಪೂರ್ವದಲ್ಲಿ ರಾಯಚೂರು, ಪಶ್ಚಿಮದಲ್ಲಿ ಧಾರಶಿವ, ಈ ಪ್ರಾಂತಗಳನ್ನು ಬ್ರಿಟಿಷ್ ನವರು ಬಿಡಿಸಿಕೊಂಡು ತಮ್ಮ ಆಡಳತಕ್ಕೆ ತೆಗೆದುಕೊಂಡರು. ಈಸೀಮೆಗಳ ಉತ್ಪತ್ತಿಯಲ್ಲಿ ಖರ್ಚು ಹೋಗಲಾಗಿ ಉಳಿದದ್ದನ್ನು ಬ್ರಿಟಿಷ್ ಸರ್ಕಾರದವರು ನಿಸಾಂ ಸರ್ಕಾರಕ್ಕೆ ಕೊಡಬೇಕೆಂದು ಸಹಾ ಗೊತ್ತಾಯಿತು. ಈ ವಿಷಯದಲ್ಲಿ ಹೈದರಾಬಾದು ಸಂಸ್ಥಾನಕ್ಕೂ ಕಂಪನಿ ಸರ್ಕಾರಕ್ಕೂ ಇರತಕ್ಕ ವ್ಯತ್ಯಾಸಗಳನ್ನು ಅರಿತು ನಿಸಾಮನಿಗೆ ಅನುಕೂಲವಾಗಿ ವ್ಯವಸ್ಥೆ ಮಾಡಿಸಲು ಶಕ್ತರಾದ ಮಂತ್ರಿಗಳು ವಿಶೇಷವಾಗಿರಲಿಲ್ಲ.

ಮಿಾರ'ಆಲಂ ನ ಮಂತ್ರಿತ್ವ

ಶ್ರೀರಂಗಪಟ್ಟಣ ಹೋದಮೇಲೆ ಮಿಾರ್ ಆಲಂನ ಹೆಸರು ವಾಸಿಯು ಬಹು ಪ್ರಬಲವಾಯಿತು. ಇವನು ಬಹಳ ದೊಡ್ಡ ಅಧಿಕಾರಗಳನ್ನು ಮಾಡಿ ಸರ್ ೧೮೦೩-೪ ರಲ್ಲಿ ಮಂತ್ರಿಪದವಿಗೆ ಬಂದನು. ಈ ಮಿಾರ್ ಆಲಂನು ಅಧಿಕಾರ ಮಾಡಿದ್ದು ನಾಲ್ಕು ವರುಷವೇ ಆದಾಗ್ಯೂ ಪೂರಿಗೆ ಉತ್ತರ ದಿಕ್ಕಿನಲ್ಲಿರುವ ಜಲಾಶ್ರಯವೂ, ೧೮ ಲಕ್ಷ ರೂಪಾಯಿ ಮುಟ್ಟಿದ ಬರಾದರಿ ಎಂಬ ಕಟ್ಟಡವೂ ಈತನ ಹೆಸರನ್ನು ಜ್ಞಾಪಕಕ್ಕೆ ತರುತಾ ಇವೆ. ಇದೂ ಅಲ್ಲದೆ ಈತನ ವಿಷಯ

ದಲ್ಲಿ ಇನ್ನೊಂದು ಶ್ಲಾಘ್ಯತರವಾದ ಸಂಗತಿ ಇದೆ. ಒಂದಾನೊಂದ ಕಾಲದಲ್ಲಿ ಕ್ಷಾಮಬಂದು ಅಕ್ಕಿಯು ರೂಪಾಯಿ ಒಂದಕ್ಕೆ ಎರಡು ಸೇರು ಮಾರುವಾಗ, ಮೀರಆಲಂನು ತನ್ನಸ್ವಂತ ಹಣದಿಂದ ೨ಲಕ್ಷರೂಪಾಯಿಗೆ ಅಕ್ಕಿಯನ್ನು ಕೊಂಡುಕೊಂಡು ಬಡಬಗ್ಗರ ಕ್ಷೇಮಕ್ಕಾಗಿ ರೂಪಾಯಿಗೆ ೧೬ ಸೇರಿನಂತೆ ಮಾರಿಸಿದನಂತೆ. ಈತನು ೧೮೦೮ರಲ್ಲಿ ಈ ಲೋಕವನ್ನು ಬಿಡಲು, ಇವನ ಅಳಿಯನಾದ ಮುನೀರುಲ್ ಮುಲ್ಕನಿಗೆ ಮಂತ್ರಿತ್ವವಾಯಿತು. ರಾಜ್ಯಭಾರಕ್ರಮದಲ್ಲಿ ಈತನಿಗೆ ವಿಶೇಷವಾಗಿ ಪರಿಶ್ರಮವಿಲ್ಲದ ಕಾರಣ, ರಾಜಚಂದೂ ಲಾಲನೆಂಬ ಶಕ್ತನಾದ ಪುರಷನು ಸುಮಾರು ೨೫ ವರುಷಗಳ ವರೆಗೆ ರಾಜ್ಯದ ಆಡಳಿತವನ್ನು ನಡಿಸಿದನು. ಈತನ ತರುವಾಯು ೧೮೪೪ ರಲ್ಲಿ ಮುನೀರುಲ್ ಮುಲ್ಕನ ಹಿರೀಮಗ ಸಿರಾಜುಲ್ ಮುಲ್ಕನಿಗೆ ಮಂತ್ರಿ ಪದವಿ ದೊರೆಯಿತು.

ಮುನೀರುಲ್ ಮುಲ್ಕ

ಈತನ ಮಂತ್ರಿತ್ವದಲ್ಲಿಯೇ ಬೀರಾರ್ ದೇಶವು ಬ್ರಿಟಿಷ್ ಸರ್ಕಾರದವರ ಆಡಳತಕ್ಕೆ ಹೋದ್ದು. ಈ ವ್ಯಸನದಲ್ಲಿಯೇ ಸಿರಾಜುಲ್ ಮುಲ್ಕನು ೧೮೫೨ ರಲ್ಲಿ ತೀರಿಹೋದನು. ಇದುವರೆಗೆ ಮೇಲೆಕಂಡಂತೆ ಬ್ರಿಟಿಷ್ ಸರ್ಕಾರದವರಿಗೂ ನಿಸಾಂಸರ್ಕಾರದವರಿಗೂ ನಡೆದ ಕರಾರುಗಳ ದೆಸೆಯಿಂದಲೂ ಮೊದಲಿನಿಂದ ಹೈದರಾಬಾದುರಾಜ್ಯದಲ್ಲಿ ನೆಲೆಗೊಂಡಿದ್ದ ಉಂಪಾಗಳ ಶಠತ್ವದಿಂದಲೂ ಮತ್ತು ಜಹಗೀರ್‌ದಾರರುಗಳ ಪ್ರಾಬಲ್ಯದಿಂದಲೂ ಹೈದರಾಬಾದು ಸೀಮೆಯಲ್ಲಿ ಬಿಗಿಯಾದ ರಾಜ್ಯಭಾರವು ಇಲ್ಲದೆ ಗಲಭೆ ಹೆಚ್ಚಾಗಿತ್ತು. ಈ ರಾಜ್ಯವನ್ನು ಹತೋಟಿಗೆ ತೆಗೆದುಕೊಳ್ಳತಕ್ಕದ್ದು ಎಂಥವರಿಗೂ ಅಸಾಧ್ಯವೆನ್ನುವ ಹಾಗಿತ್ತು.

ಸಿರಾಜುಲ್ ಮುಲ್ಕ

———————

## ೨ ನೇ ಅಧ್ಯಾಯ.

---

### ಸಾಲಾರಜಂಗನ ಜನನ, ಅಭಿವೃದ್ಧಿ.

ರಾಜ್ಯದಸ್ಥಿತಿ

ರಾಜ್ಯದಲ್ಲಿಯೋ ದೇಶಾಂತರಗಳಿಂದ ಬಂದು ಸೇರಿಕೊಂಡಿರತಕ್ಕ ಪರಟುಜನರ ಮತ್ತು ಪುಂಡುಜನರ ಹಾವಳಿ; ಸಾಮಾಜಿಕರಾದ ಪುರಾತನ ವಂಶದ ನವಾಬರೋ ಸ್ವಕಾರ್ಯದಲ್ಲಿ ಜಾಗರೂಕರು ; ರೈತರಿಂದ ವಸೂಲಾದ ಹಣವೋ ಕಾಕಭಾಜನ ; ಖಜಾನೆಯೋ ಬರಿದು ; ರಾಜ್ಯಕ್ಕೆ ಸಾಲವೋ ದಿನಚರಿ ವೃದಿಯಾಗತಕ್ಕದ್ದು ; ಸಾಲಗಾರರ ತಗಾದೆಯೋ ರಾಜ್ಯವನ್ನೇ ಮುಳುಗಿಸತಕ್ಕಂಥಾದ್ದು ; ವಿವೇಕಶಾಲಿಗಳಾದ ಮಂತ್ರಿಗಳೋ ಕಾಲಗತಿಯನ್ನು ಹೊಂದಿದರು ; ನಿಸಾಮನಿಗೆ ಎಲ್ಲಾ ಭಾಗದಲ್ಲಿಯೂ ಸಹಾಯ ಮಾಡುತೇವೆಂದು ಬದ್ಧ ಕಂಕಣರಾಗಿದ್ದ ಇಂಗ್ಲಿಷರ ಸರ್ಕಾರವೊ ಲಾರ್ಡು ಡಾಲ್‌ಹೂಸಿಯ ಮಹಾಕಾರ್ಯದಲ್ಲಿ ರಾಜ್ಯವನ್ನು ನುಂಗಿಕೊಳ್ಳುವುದೋ ಎಂದು ಭೀತಿಯನ್ನು ಹುಟ್ಟಿಸಿದ್ದ ಮಹಾ ಸಿಂಹ. ಈ ಸ್ಥಿತಿಯಲ್ಲಿದ್ದ ಹೈದರಾಬಾದು ರಾಜ್ಯಕ್ಕೆ ಸಾಲಾರ್‌ಜಂಗನು ಮಂತ್ರಿಯಾದನು.

ಸಾಲಾರಜಂಗನ ಹಿರಿಯರು

ಸಾಲಾರ್‌ಜಂಗನ ವಂಶದ ಮೂಲಪುರುಷನು ಮತೋದ್ಧಾರಕನಾದ ಮೊಹಮ್ಮದನ ಸಮಕಾಲೀನನು. ಇವನಿಗೆ ಪೈಗಂಬರನಲ್ಲಿ ವಿಶೇಷವಾದ ಭಕ್ತಿ ಇತ್ತು. ಮೊಹಮ್ಮದನಿಗೆ ಯಾವುದೋ ಒಂದು ಯುದ್ಧದಲ್ಲಿ ಎರಡು ಹಲ್ಲು ಬಿದ್ದು ಹೋಗಿದ್ದ ಕಾರಣ, ಸಾಲಾರ್‌ಜಂಗನ ವಂಶದ

ಮೂಲಪುರುಷನು ತನ್ನ ಹಲ್ಲುಗಳೆಲ್ಲವನ್ನೂ ಕೀಳಿಸಿಕೊಂಡನಂತೆ. ಇದು ನಿಜವಾಗಿದ್ದರೆ ದೊಡ್ಡವರಲ್ಲಿ ಆ ಪೂರ್ವಿಕರಿಗೆ ಇದ್ದ ಭಕ್ತಿಯು ಈ ಕಾಲದಲ್ಲಿ ಜನರಲ್ಲಿ ಸ್ವಲ್ಪಮಟ್ಟಿಗೆ ಹಾಸ್ಯರಸವನ್ನು ಉದ್ರೇಕ ಮಾಡುವುದು. ಇದು ಸುಳ್ಳಾದರೆ ಈ ಕಥೆಯನ್ನು ಹೇಳಿದವನು ಗುರುಭಕ್ತಿಯ ಆಧಿಕ್ಯವನ್ನು ತೋರಿಸಿದಂತಾಗುವುದು. ಸಾಲಾರ ಜಂಗನ ತಾಯಿಕಡೆಯವರು ಇರಾಣದೇಶೀಯರು. ಈ ಬಗೆಯ ಗುರುಭಕ್ತನ ವಂಶೀಯರು ಹೈದರಾಬಾದಿಗೆ ಯಾವಾಗ ಬಂದರೋ ಗೊತ್ತಾಗುವುದಿಲ್ಲ. ಮೀರ್ ಆಲಂನ ಅಳಿಯ ಮುನೀರುಲ್ ಮುಲ್ಕ್. ಇವನ ಹಿರೀಮಗನ ಮಗನೇ ಸಾಲಾರ್ ಜಂಗು. ಇವನ ಎರಡನೇ ಮಗನು ಸಿರಾಜಲ್ ಮುಲ್ಕ್. ಚಿಕ್ಕಪ್ಪನಾದ ಇವನು ಮಂತ್ರಿಯಾಗಿದ್ದು ೧೮೫೩ ರಲ್ಲಿ ತೀರಿಹೋದಮೇಲೆ ಸಾಲಾರಜಂಗನಿಗೆ ಹೈದರಾಬಾದಿನಲ್ಲಿ ವಜೀರ್ ಕೆಲಸವಾಯಿತು.

ಸಾಲಾರಜಂಗನ ಜನನ, ಬಾಲ್ಯ

ಸಾಲಾರನ ಹೆಸರು ಮೀರ್ ತುರಾಬ್ ಅಲ್ಲಿಖಾನ್ ಸಾಲಾರ್ ಜಂಗ್ ಸಿರಾಜುದ್ದೌಲ ಮುಖ್ತಿಯಾರುಲ್ ಮುಲ್ಕ್. ಇವನು ಸನ್ ೧೮೨೯ ನೇ ಈಸವಿ ಜೂನ್ ೨ಕ್ಕೆ ಸರಿಯಾದ ೧೨೪೪ ನೇ ಹಿಜರಿ ಜಮಾದಿಯಸ್ಸಾನಿ ತಿಂಗಳಲ್ಲಿ ಹುಟ್ಟಿದನು. ಬಾಲ್ಯದಲ್ಲಿ ಕಷ್ಟವೇ ಪ್ರಾಪ್ತವಾಗಿತ್ತು. ಎಳೇಮಗುವಾಗಿರುವಾಗಲೇ ತಂದೆ ತೀರಿಹೋದನು. ಸಾಲಾರನ ೪ನೇ ವರುಷದಲ್ಲಿ ತಾತನಾದ ಮುನೀರುಲ್ ಮುಲ್ಕನೂ ತೀರಿಹೋದನು. ಸಾಲಾರನು ಎಳೇಮಗುವಾಗಿದ್ದಾಗ ಅವನಿಗೆ ವಿಷಮ ಶೀತಜ್ವರಬಂತು. ಏಳು ಹಗಲು ಏಳುರಾತ್ರೆ ಮೈಮೇಲೆ ಜ್ಞಾನವಿಲ್ಲದೆ ಮಗು ಮಲಗಿಕೊಂಡು ಬಿಟ್ಟಿತು. ಮಗು ಎಲ್ಲಿ ಸತ್ತು ಹೋ

ಗುವುದೋ ಎಂದು ಭೀತಿಹುಟ್ಟಿತು. ಆಗ ಮುನೀರುಲ್‌ಮುಲ್ಕನು ತನ್ನ ಪ್ರಾಣಹೋದರೂ ಹೋಗಲಿ ಕೇವಲವಾಗಿ ತನ್ನ ಅಭಿಮಾನಕ್ಕೆ ಪಾತ್ರವಾಗಿರುವ ಮೊಮ್ಮಗನಾದ ತುರಾಬಲ್ಲಿಗೆ ಗುಣವಾದರೆ ಸಾಕೆಂದು ದೇವರಿಗೆ ಹರಕೆ ಹೊರುತಾ, ತಮ್ಮ ಶಾಸ್ತ್ರರೀತ್ಯಾ ಶಾಸ್ಸದಖ್ ಎಂಬ ಪ್ರಕ್ರಿಯೆಯನ್ನು ಅನುಸರಿಸಿ ಆಚರಿಸಿದನಂತೆ. ದಿನಕ್ರಮೇಣ ಆ ಮಗುವಿಗೆ ಬಂದಿದ್ದ ಜಾಡ್ಯವು ತಾತನಿಗೆ ಸಂಭವಿಸಿ ಮಗುವಿಗೆ ಗುಣವಾಯಿತು. ಮುನೀರುಲ್‌ಮುಲ್ಕನು ಹದಿನೈದು ದಿವಸದೊಳಗಾಗಿ ದೈವಾಧೀನನಾದನು ಮುಸಲ್ಮಾನರಲ್ಲಿ ಈ ವಿಧವಾದ ಒಂದು ಪ್ರಕ್ರಿಯೆ ಇರುವುದನ್ನು ಚರಿತ್ರೆಯಲ್ಲಿಯೂ ಓದಿದೇವೆ. ಹುಮಾಯೂನನಿಗೆ ದೊಡ್ಡಜಾಡ್ಯ ಸಂಭವಿಸಿ ಪ್ರಾಣ ಉಳಿಯುವುದು ಸ್ಸಂಶಯವೆಂದು ತೋರಿತು . ಆಗ ತಂದೆಯಾದ ಬಾಬರನು ಇದೇ ಶಾಸ್ಸದಖ್ ಕ್ರಮವನ್ನು ಅನುಸರಿಸಿ ಹಾಸಿಗೆಮೇಲೆ. ಮಲಗಿದ್ದ ಮಗನ ಸುತ್ತಲೂ ಮೂರು ಪ್ರದಕ್ಷಣೆಯನ್ನು ಮಾಡಿದನು. ಮಗನ ರೋಗ ಅಪ್ಪನಿಗೆ ಬಂತು, ಹುಮಾಯೂನನಿಗೆ ಗುಣವಾಯಿತು. ಬಾಬರನು ಸ್ವಲ್ಪ ದಿವಸದಲ್ಲಿಯೇ ಮರಣ ಹೊಂದಿದನು.

ತುರುಕರ ಪರಾರ್ಥಪ್ರವರ್ತನೆ

ಹೀಗೆ ಪರಾರ್ಥವಾಗಿ ಆತ್ಮತ್ಯಾಗ ಮಾಡಿಕೊಳ್ಳತಕ್ಕವರು ಲೋಕದಲ್ಲಿ ಅಪೂರ್ವ. ಪ್ರಪಂಚದಲ್ಲಿ ತಾನು ಹೊರತು ಉಳಿದ ಚರಾಚರವೆಲ್ಲಾ ಪರಕೀಯವೇ. ತಾನು ಎಂಬ ಪದಾರ್ಥ ಮಗನೂ ಅಲ್ಲ ಮೊಮ್ಮಗನೂ ಅಲ್ಲ. ನಮ್ಮ ಮೈಗಾಯುವಾದರೆ ಯಾತನೆ ನಮಗಲ್ಲದೆ ಇತರರಿಗಲ್ಲ. ಯಾತನೆಯಲ್ಲಿ ನಾವು ನರಳುವಾಗ ನಮ್ಮ ಶರೀರಕ್ಕೆ ಉಂಟಾಗುವ ಬಾಧೆ ಇತರ ಯಾರ ಶರೀರಕ್ಕೂ ಆಗುವುದಿಲ್ಲ.

ಸಂತಾಪ ಅನುತಾಪಗಳನ್ನು ಬಿಟ್ಟು ಮಾತನಾಡುವಲ್ಲಿ ಮಗನನ್ನು ಚುಚ್ಚಿದರೆ ತಂದೆಯ ಮೈಯಲ್ಲಿ ರಕ್ತ ಬರುವುದಿಲ್ಲ. ಇತರರು ಎಷ್ಟೇ ಪ್ರೇಮಾಸ್ಪದರಾಗಿರಲಿ, ತಾನು ಬದುಕುವುದು ದೊಡ್ಡದು ಎಂದು ಭಾವಿಸುತಾರೆ. ಇದು ಮನುಷ್ಯ ಸಾಮಾನ್ಯರಲ್ಲಿ ಸಹಜವಾದ ಧರ್ಮವಾಗಿದೆ. ಹೀಗಿದ್ದರೂ ಒಬ್ಬರಿಗೋಸ್ಕರ ಮತ್ತೊಬ್ಬರು ಪ್ರಾಣತ್ಯಾಗಮಾಡಿಕೊಳ್ಳುವ ಪರಾರ್ಥಪ್ರವರ್ತನೆಯು ಮುಸಲ್ಮಾನರಲ್ಲಿರುವ ಹಾಗೆ ಇತರರಲ್ಲಿಲ್ಲವೆಂದು ಅನುಭವದಿಂದ ಹೇಳಬಹುದಾಗಿದೆ. ಈ ವಿಧವಾದ ಪ್ರಕ್ರಿಯೆಗೆ ಮುಸಲ್ಮಾನರಲ್ಲಿ ಒಂದು ಶಾಸ್ತ್ರವೇ ಇದೆ. ಹೀಗಿದ್ದರೂ ಪರೋಪಕಾರ ಬುದ್ಧಿಯು ತುರಕರಲ್ಲಿಲ್ಲವೆಂದು ಹೇಗೆ ಹೇಳುವುದು ? ಒಂದು ರಾಜ್ಯವನ್ನು ಜೈಸಿದರೆ ಜೈಸಿದವರು ಜಯಿಸಲ್ಪಟ್ಟವರನ್ನು ನಿಕೃಷ್ಟವಾಗಿ ಕಾಣುವುದು ಪ್ರಪಂಚ ಹುಟ್ಟಿದಾಗಿನಿಂದ ಸಹಜ ಧರ್ಮವಾಗಿದೆ. ಈಕ್ಷಣದವರೆಗೂ ಈ ನಡತೆ ವಾಡಿಕೆಯಲ್ಲದೆ ದೇಶವನ್ನು ಜೈಸಿಕೊಂಡರೆ ಅಲ್ಲಿರುವುದೆಲ್ಲವನ್ನೂ ತಾವು ಹೊತ್ತುಕೊಂಡು ಹೋಗಬೇಕೆಂಬ ಆಶೆಯೂ, ಅದಕ್ಕೆ ಅಡ್ಡಿ ಮಾಡುವ ದೇಶವಾಸಿಗಳನ್ನು ಹೇಗಾದರೂ ನಿವಾರಣ ಮಾಡಬೇಕೆಂಬ ದುರ್ಮಾರ್ಗತನವೂ, ಹೊಸದಾಗಿ ಬಂದವರಿಗೆ ಇರಲೇ ಇರುವುದು. ಅವರಲ್ಲಿರುವ ಕ್ರೌರ್ಯವು ಸ್ವಾರ್ಥಪರತೆಯಿಂದ ಉಂಟಾದ್ದು. ಇಷ್ಟು ಮಾತ್ರಕ್ಕೇ ಆ ಜನರ ಸ್ವಭಾವವೆಲ್ಲಾ ಯಾವಾಗಲೂ ಪರಹಿಂಸೆಯನ್ನೇ ಕೋರತಕ್ಕದ್ದೆಂದು ಹೇಳಲು ಆಧಾರಸಾಲದು. ಈ ಜನರು ತಮ್ಮ ದೇಶದಲ್ಲಿರುವಾಗ ಪರೋಪಕಾರ ಮಾಡಿದ್ದೂ ದೀನಾನಾಥರನ್ನು ಆತ್ಮಪ್ರಯೋಜನದ ಮೇಲೆ ದೃಷ್ಟಿ ಇಡದೇ ಕಾಪಾಡಿದ್ದೂ ಗ್ರಂಥಗಳಲ್ಲಿ ಮುದ್ರಿತವಾಗಿದೆ. ಇದೆಲ್ಲವನ್ನೂ ಮರೆತು ಬಿಡುವುದಕ್ಕಾಗುವುದಿಲ್ಲ. ನೀರಕ್ಷಾಮ ಬಂದಾಗ ನಿರಾಲಂನು ನೂರು ಲಕ್ಷ ರೂಪಾಯಿನ ಅಕ್ಕಿಯನ್ನು ಕೊಂಡುಕೊಂಡು ಬಡವರಿಗೋಸ್ಕರ ಉಪಯೋಗಿಸಿದ್ದೇ ಸಾಕಾಗಿದೆ.

ಸಾಲಾರಜಂಗನ್ನು ಅಜ್ಜಿಸಾಕಿದ್ದು

ಮುನೀರುಲ್ ಮುಲ್ಕನಿಗೆ ಸಾಯುವ ಕಾಲದಲ್ಲಿ ೨೫ ಲಕ್ಷ ರೂಪಾಯಿ ಸಾಲವಿತ್ತು. ಇದೆಲ್ಲಾ ಗೃಹಕೃತ್ಯಕ್ಕಾಗಲಿ, ದುಂದುಗಾರಿಕೆಗಾಗಲೀ ಮಾಡಿದ್ದಲ್ಲ; ಮುನೀರನು ವಸೀರನಾಗಿದ್ದ ಕಾಲದಲ್ಲಿ ತನ್ನ ಗೌರವವನ್ನು ಕಾಪಾಡಿಕೊಂಡು ತನ್ನ ಧಣಿಯಾದ ನಿಸಾಮನ ಪ್ರತಿಷ್ಠೆಯ ಅತಿಶಯವನ್ನು ತೋರ್ಪಡಿಸುವುದಕ್ಕೂ ರಾಜಕೀಯ ಸಂಬಂಧವಾದ ಇತರ ದರಬಾರ್ ಖರ್ಚಿಗೂ ಮಾಡಿದ್ದಾಗಿತ್ತು. ಈ ಋಣವನ್ನು ತೀರಿಸುವುದಕ್ಕೆ ಬೇರೇ ಮಾರ್ಗವೇನೂ ಇರಲಿಲ್ಲ. ಆಗ ನಿಸಾಮನಾಗಿದ್ದ ನಾಸಿಯುದ್ ದೌಲನು ಆ ಸಾಲವನ್ನು ತಾನು ತೀರಿಸಿ ಮುನೀರನ ಪಿತರಾರ್ಜಿತವಾದ ಆಸ್ತಿಯನ್ನು ಬಹುಮಟ್ಟಿಗೆ ತಾನು ತೆಗೆದುಕೊಂಡದ್ದಲ್ಲದೆ ಮನೆಯಲ್ಲಿ ಹೆಂಗಸರು ಇಟ್ಟುಕೊಳ್ಳುತಿದ್ದ ನಗಗಳನ್ನೂ ತನ್ನ ವಶಮಾಡಿಕೊಂಡನು. ಸಾಲಾರನ ಚಿಕ್ಕಪ್ಪನಾದ ಸಿರಾಜುಲ್ ಮುಲ್ಕನು ಮುನೀರನ ತರುವಾಯ ಮಂತ್ರಿಪದಕ್ಕೆ ಬಂದಾಗ್ಯೂ, ಈ ಕುಟುಂಬಕ್ಕೆ ಯಾವ ಸಹಾಯವನ್ನೂ ಮಾಡಲಿಲ್ಲ. ಈ ಮಗುವನ್ನು ಯೋಗ್ಯವಾದ ರೀತಿಯಲ್ಲಿ ಸಾಕಲು ಅದರ ಅಜ್ಜಿವಿನಾ ಇನ್ನು ಯಾರೂ ದಿಕ್ಕಿರಲಿಲ್ಲ. ಈ ಮುದುಕಿಯು ಒಳ್ಳೇ ಬುದ್ಧಿಶಾಲಿಯಾಗಿಯೂ ದೊಡ್ಡ ಮನಸುಳ್ಳವಳಾಗಿಯೂ ಇದ್ದಕಾರಣ ಈ ಮಗುವಿಗೆ ಒಳ್ಳೇನಡತೆಯನ್ನು ಚೆನ್ನಾಗಿ ಕಲಿಸುತಾಬಂದಳು. ತುರಾಬನು ಕೇವಲ ವಿಧೇಯನಾಗಿದ್ದದರಿಂದ ಅಜ್ಜಿ ಹೇಳಿಕೊಟ್ಟ ಒಳ್ಳೇ ನಡತೆಯೇ ಅವನ ಪುರೋವೃದ್ಧಿಗೆ ಮುಖ್ಯ ಬಂಡವಾಲವಾಯಿತು. ಇವನ ಏಳನೇ ವರುಷದಲ್ಲಿ ಬಿಸ್ಮಿಲ್ಲಾ ಪ್ರಸ್ತವಾಯಿತು. ಆದಕ್ಕೆ ದೊರೆಯಾದ ನಿಸಾಮು ಸಹಾ

ಬಂದಿದ್ದನು. ಉರ್ದು ಫಾರ್ಸಿ ಅರಬ್ಬಿ ಈ ಭಾಷೆಗಳನ್ನು ಕಲಿಸಲು ಒಬ್ಬ ಉಪಾಧ್ಯಾಯನನ್ನು ಇರಿಸಿದರು. ಓದುಗಾರಿಕೆ ಚೆನ್ನಾಗಿ ಸಾಗಲಿಲ್ಲ. ಈ ಬಾಲ್ಯಕನಿಗೆ ಯಾವಾಗಲೂ ದೇಹದಲ್ಲಿ ಏನಾದರೂ ಜಾಡ್ಯವಿರುತ್ತಲೇ ಇತ್ತು. ಓದುಗಾರಿಕೆಯಲ್ಲಿ ಇವನಿಗೆ ವಿಶೇಷವಾಗಿ ಇಚ್ಛೆ ಇರಲಿಲ್ಲ. ಹೀಗೆ ಏಳು ವರುಷ ಕಳೆಯಿತು. ಇವನು ೧೯ನೇ ವರುಷದವರೆಗೂ ತನಗೆ ಮನಸ್ಸುಬಂದ ಪುಸ್ತಕಗಳನ್ನು ಓದುತಾ ಕಾಲವನ್ನು ಕಳೆಯುತಾ ಬಂದನು. ಇವನು ೧೯ ನೇ ವರುಷದಲ್ಲಿ ಇಂಗ್ಲಿಷನ್ನು ಅಭ್ಯಾಸಮಾಡಿದನು. ಇವನ ಅಜ್ಜಿಯ ಬಲವಂತಕ್ಕೆ ಸ್ವಲ್ಪಮಟ್ಟಿಗೆ ಗಣಿತ ಮತ್ತು ಲೆಕ್ಕಾ ಇಡುವುದು ಇದರಲ್ಲಿ ಪರಿಶ್ರಮ ಉಂಟಾಯಿತು. ಇವರ ಜಹಗೀರೀ ಗ್ರಾಮಗಳಿಂದ ಬಂದ ಲೆಕ್ಕಗಳನ್ನು ಸರಿನೋಡಲು ಅಜ್ಜಿಯು ತಪ್ಪದೇ ತುಂಬಲ್ಲಿಯು ಬಳಿಗೆ ಕಳುಹಿಸುತಿದ್ದಳು. ಕಾರಕೂನರಿಂದ ಈ ಲೆಕ್ಕಗಳನ್ನೆ ಮೊದಲು ಕೇಳಿ ತಿಳಿದುಕೊಳ್ಳುವುದು ತರುವಾಯ ಅಜ್ಜಿಗೆ ಇದೆಲ್ಲವನ್ನೂ ತಿಳಿಯಹೇಳುವುದು, ಹೀಗೆ ಮಾಡುತಿದ್ದನು. ಆಕೆಗೆ ಇದೆಲ್ಲದರಲ್ಲಿಯೂ ಪರಿಶ್ರಮವಿದ್ದಕಾರಣ ತುರಾಬನು ಅಜ್ಜಿಗೆ ಲೆಕ್ಕದಲ್ಲಿ ಸಮಾಧಾನ ಹೇಳುವುದು ಸುಲಭವಾದ ಕೆಲಸವಾಗಿರಲಿಲ್ಲ.

ಸಾಲಾರಜಂಗನಿಗೆ ಉದ್ಯೋಗವಾದದ್ದು

ಇಷ್ಟರಮಟ್ಟಿಗೆ ತಯಾರಾಗಿದ್ದ ಸಾಲಾರ್ ಜಂಗನಿಗೆ ಒಂದು ನೌಕರಿ ದೊರೆಯಿತು. ಅದರ ವಿವರ ಹೇಗೆಂದರೆ; ಇದಕ್ಕೆ ಮುಂಚೆ ಕೆಲವು ಸೀಮೆಗಳ ಅಡಳಿತಗಳನ್ನು ನಡಿಸಲು ಇತರರನ್ನು ನೇಮಿಸುವ ಹಾಗೆಯೇ ಯೂರೋಪು ಜನರನೂ ನೇಮಿಸುವ ವಾಡಿಕೆ ಇತ್ತು. ಅದರಂತೆ ಡೇರ್ಟ ಎಂಬ ಒಬ್ಬ ಮನ

ಷ್ಯನನ್ನು ನೇಮಕಮಾಡಿದ್ದರು. ಯೂರೋಪು ಜನರನ್ನು ಈ ವಿಧವಾಗಿ ನೌಕರಿಗೆ ಇಟ್ಟುಕೊಳ್ಳುವ ಭಾಗದಲ್ಲಿ ಇಂಡಿಯಾ ಸರ್ಕಾರದವರು ಆಕ್ಷೇಪಣೆಮಾಡಿದರು. ಆಗ ಅವನನ್ನು ಕೆಲಸ ದಿಂದ ತೆಗೆದರು. ಆ ಕೆಲಸವು ಸಿರಾಜುಲ್ ಮುಲ್ಕನ ಕೈಗೆ ಬಂತು; ಆದರೆ ಸಿರಾಜನಿಗೆ ಕೂಡಲೆ ವಸೀರ್ ಕೆಲಸವಾದ್ದರಿಂ ದ ತನಗಿದ್ದ ಕೆಲಸವನ್ನು ಸಾಲಾರಜಂಗನಿಗೆ ಮಾಡಿಸಿದನು. ಈ ಯೌವನಸ್ಥನು ಎಂಟು ತಿಂಗಳ ಮಟ್ಟಿಗೆ ಈ ಕೆಲಸವನ್ನು ನೋ ಡಿದನು. ಆ ಸ್ವಲ್ಪಕಾಲದಲ್ಲಿಯೇ ಸಾಲಾರನು ಭೂಮಿ ಕಂದಾ ಯದ ವಿಚಾರವನ್ನೆಲ್ಲಾ ನೋಡಿ ತಿಳಿದುಕೊಂಡು ಕೇಳಿದ್ದಕ್ಕೆ ಉತ್ತರ ಹೇಳುವ ಮಟ್ಟಿನ ಪ್ರಜ್ಞೆಯನ್ನು ಸಂಪಾದನೆ ಮಾಡಿದ್ದೂ ಅಲ್ಲದೆ ಆ ಆಡಳಿತವನ್ನು ತೃಪ್ತಿಕರವಾಗಿ ನಡಿಸುತಾ ಬಂದನು. ಮುನೀರುಲ್ ಮುಲ್ಕನ ಭಾರೀಸಾಲವನ್ನು ಅರಮನೆಯಿಂದ ತೀರಿ ಸಿದ್ದಕ್ಕಾಗಿ ಈ ಕುಟುಂಬದವರ ಜಹಗೀರುಗಳು ನಿಸಾಮನ ಆಡ ಳಿತದಲ್ಲಿದ್ದದು ಸರಿಯಷ್ಟೆ. ಆ ಜಹಗೀರುಗಳೆಲ್ಲವನ್ನೂ ಈ ಕಾ ಲದಲ್ಲಿ ಆ ಕುಟುಂಬದವರಿಗೇ ಹಿಂತಿರುಗಿ ಕೊಟ್ಟುಬಿಟ್ಟರು. ಆ ಜಹಗೀರುಗಳ ವಿಚಾರಣೆಗೆ ಸಾಲಾರಜಂಗನು ನೇಮಕವಾ ದನು. ಇದೇಕಾಲದಲ್ಲಿ ರಾಜ್ಯದ ಆಡಳತವೆಲ್ಲಾ ಸಾಲಾರನಿಗೆ ಅನುಭವವಾಗುತಾಬಂತು. ಚಿಕ್ಕಪ್ಪನಾದ ಸಿರಾಜುಲ್ ಮುಲ್ಕನು ರಾಜ್ಯಭಾರ ವಿಚಾರವಾಗಿ ಆಗಾಗ್ಯೆ ತುರಾಬನ ಅಭಿಪ್ರಾಯವನ್ನು ಕೇಳುತಾ ಬಂದನು. ಆದರೆ ಇವನು ಹೇಳುವ ಸಲಹೆ ಎಲ್ಲಾ ವಿಶೇಷ ಗಲಭೆಗೆ ಆಕರವಾಗುವ ಹಾಗೆ ಕಂಡಿತು. ಸಿರಾಜನ ರಾಜ್ಯಭಾರಕ್ರಮವು ಹಿಂದಿನಂತೆಯೇ ಶುದ್ಧ ಪ್ರಾಮಾಣಿಕತೆಗೆ ಡಖ್ಯಾತಿಗೊಂದ್ದಾಗಿರಲಿಲ್ಲ. ಆದರೆ ಯುವ್ವನಸನಾದ ಸಾಲಾರನು

ಯಾವಾಗಲೂ ಪ್ರಾಮಾಣಿಕವಾದ ಮಾರ್ಗದಲ್ಲಿಯೇ ನಡೆಯಲು ಸಿದ್ಧಾಂತಮಾಡಿಕೊಂಡಿದ್ದನು. ಇದರಿಂದ ವಿರೋಧವಾದ ನಡತೆಯುಳ್ಳ ಸಿರಾಜನಿಗೆ ಇವನಲ್ಲಿ ಮನಸ್ಸು ಒಡೆದು ಹೋಯಿತು. ಮಗನಲ್ಲಿದ್ದ ನಂಬಿಕೆಯು ಕೆಟ್ಟುಹೋಯಿತು. ಇಷ್ಟಾದರೂ ತುರಾಬನಿಗೆ ಅನೇಕ ಸಂಗತಿಗಳಲ್ಲಿ ಇದ್ದ ಸ್ವತಂತ್ರವಾದ ಅಭಿಪ್ರಾಯವು ಬದಲಾವಣೆಯಾಗಲಿಲ್ಲ. ಬೀರಾರ್ ವಿಚಾರದಲ್ಲಿ ಬ್ರಿಟಿಷ್ ಸರ್ಕಾರದವರು ಮಾಡಿದ ಏರ್ಪಾಡೂ ನಿಸಾಮನ ಕಡೆಯವರು ಅವರಿಗೆ ತಕ್ಕ ಜವಾಬನ್ನು ಕೊಡದೆ ಅತಿಯಾಗಿ ಸಾವಕಾಶಮಾಡುತಾ ಡೋಲಾಯಮಾನಸರಾಗಿದ್ದದೂ ಸಹಾ ಶುದ್ಧ ಅನ್ಯಾಯವೆಂದು ಸಾಲಾರನ ಮನಸ್ಸಿನಲ್ಲಿ ಜಿತವಾಗಿ ನಿಂತುಹೋಗಿತ್ತು.



## ೩ ನೇ ಅಧ್ಯಾಯ.

### ಸಾಲಾರಜಂಗನಿಗೆ ಮಂತ್ರಿತ್ವವಾದ್ದು.

ಅರಮನೆಯ ಸ್ಥಿತಿ

ಬೀರಾರ್ ದೇಶವನ್ನು ಇಂಗ್ಲಿಷ್ ಸರಕಾರದವರು ಸ್ವಾಧೀನಮಾಡಿಕೊಂಡರಲ್ಲಾ ಎಂಬ ವ್ಯಸನವು ಸಿರಾಜುಲ್ ಮುಲ್ಕನ ಮನಸ್ಸಿನಲ್ಲಿ ಕೊರೆಯುತ್ತಲೇ ಇತ್ತು. ಇದು ಆದ ಆರುತಿಂಗಳೊಳಗಾಗಿ ಈ ಕೊರಗಿನಲ್ಲಿಯೇ ಸರ್ ೧೮೫೩ ನೇ ಈಸವಿ ಜುಲೈ ತಿಂಗಳ ಆದಿಭಾಗದಲ್ಲಿ ಇವನು ಮೃತಪಟ್ಟನು. ಅರಮನೆಯಲ್ಲಿ ಯಾವುದೂ ಭದ್ರವಾಗಿರಲಿಲ್ಲ. ರಾಜಕೀಯ ವ್ಯಾಪಾರಗಳು ಯೇನೂ ತಿಳಿಯದಿದ್ದರೂ ತಂತಮ್ಮ ಸ್ವಪ್ರಯೋಜನವು ಕೆಡದಹಾಗೆ ನೀತಿಯುಕಟ್ಟಿಲ್ಲದ ಮಾತುಗಳನ್ನು ಹೇಳತಕ್ಕ ಅಲ್ಪರು ನಿಸಾಮನನ್ನು ಸುತ್ತಿಕೊಂಡಿದ್ದರು. ನಿಸಾಮನ ಸಮೀಪಕ್ಕೆ ಹೋಗಲು ಅರಮನೆಯಲ್ಲಿ ಖಾಸಾ ಸೇವಾವೃತ್ತಿಯಲ್ಲಿದ್ದು ಓಡಾಡಿಕೊಂಡಿದ್ದವರಿಗೆ ಹೊರತು ಇನ್ನು ಯಾರಿಗೂ ಸೌಲಭ್ಯವಿರಲೇ ಇಲ್ಲ. ದೊರೆಯು ದೇವಡಿಯನ್ನು ಬಿಟ್ಟು ಈಚೆಗೆ ಬರುತಲೇ ಇರಲಿಲ್ಲ. ಅಥವಾ ಬಂದರೂ ಹೊರಗಿನ ಜನರು ಯಾರನ್ನೂ ಸಮೀಪಕ್ಕೆ ಸೇರಿಸುತಿರಲಿಲ್ಲ. ಯಾರಸಂಗಡಲೂ ಮಾತನಾಡದೇ ಇರುವುದೇ ದೊಡ್ಡತನದ ಲಕ್ಷಣವೆಂದು ತಿಳಿದುಕೊಂಡು ಇರತಕ್ಕ ಅರಸರಿಗೆ ಬುದ್ಧಿವಾದವನ್ನು ಹೇಳಲು ಹೋಗುವುದು ಯಾರಿಗೂ ಕಷ್ಟ. ವಿವೇಕಶಾಲಿಗಳು ಯಾರಾದರೂ ಪ್ರಯತ್ನಮಾಡಿದರೆ ಅರಸರು ಕೇವಲ ಮೌನವಾಗಿರುತಾ, ತಾವು ಎಲ್ಲರಿಗಿಂತಲೂ ಪ್ರತಿಕ್ಷಣದಲ್ಲಿಯೂ ದೊಡ್ಡವರೆಂದು ತಿಳಿದುಕೊಂಡು, ಇತರ ದೊಡ್ಡಮನು

ಷ್ಯರು ವಿದ್ಯಾವಂತರು ಪ್ರಾಮಾಣಿಕರು ಅನುಭವಶಾಲಿಗಳು ಯಾರು ದರ್ಶನಕ್ಕೆ ಬಂದರೂ ವಿಶೇಷವಾದ ಬಿಂಕದಿಂದ ಯಾವ ಮಾತನ್ನೂ ಆಡದೆ ಬಂದ ಮನುಷ್ಯರ ಮಾತು ಎತ್ತಲೋ ತಮ್ಮ ಮನಸ್ಸು ಎತ್ತಲೋ ಎನ್ನುವಹಾಗೆ ಸುಮ್ಮನೇ ಕೂತು ಅವರು ಮುಜರೆಮಾಡಿ ಹೊರಟುಹೋದಮೇಲೆ ತಮ್ಮ ಪ್ರೀತಿಪಾತ್ರರಲ್ಲಿ ಯಥಾಪ್ರಕಾರದ ಚೆಲ್ಲಾಟಗಳನ್ನು ಆಡುತಾ, ತಮ್ಮ ಕರ್ಣೇಜಪರನ್ನು ಕುರಿತು “ಏನೋ ಅವನಷ್ಟಕ್ಕೆ ಅವನು ಬೊಗಳಿಕೊಂಡು ಲೋಚಿದ, ಅದೇನು ಅವಹೇಳುತಾ ಇದ್ದ ಹಳೇಕಂಬರಾಮಾಯಣ!” ಎಂದು ಕೇಳುವ ಮತ್ತತೆಯನ್ನು ಅವಲಂಬಿಸಿದಾರೆ. ಯಾವಾಗಲೂ ಮನುಷ್ಯನು ಲಕ್ಷ್ಮೀಪುತ್ರನಾಗಲಿ ದರಿದ್ರನಾಗಲಿ ಸುಮ್ಮನೇ ಕೂತಿರುವುದಕ್ಕಾಗುವುದಿಲ್ಲ. ಯಾರಸಂಗಡಲಾದರೂ ಮಾತನಾಡಬೇಕಾಗುವುದು. ಇಂಥಾ ಕೆಲಸಕ್ಕೆ ತಮ್ಮ ಸಮೀಪದಲ್ಲಿ ಯಾವಾಗ್ಯೂ ಸಲಿಗೆಯಾಗಿರತಕ್ಕವರಲ್ಲದೆ ಮತ್ತೆ ಯಾರಿಗೆ ಯೋಗ್ಯತೆ ಇದೆ? ಇದರಲ್ಲಿ ಇತರರ ನಡತೆ ಕುರಿತು ನಿಜವಾಗಲಿ ಸುಳ್ಳಾಗಲಿ ಹೇಳುವ ಹರಟೆಯು ಕೆಲಸವಿಲ್ಲದೇ ಭೋಗಪಡುವವರ ಕಿವಿಗೆ ಇಂಪಾಗಿ ತೋರುವುದು. ಇಂಥಾ ಮಹಾಸಾನ್ನಿಧ್ಯದಲ್ಲಿರತಕ್ಕ ಅಲ್ಪಪರಿವಾರವು ಸಮಯ ಸಿಕ್ಕೀತೆ ಎಂದು ಕಾದಿದ್ದು ಬಂದಕ್ಕೆ ಹತ್ತುಸೇರಿಸಿ ಅನೃತವನ್ನು ಹೇಳಿ ಧಣಿಯ ಸ್ವಭಾವವನ್ನು ಬಲ್ಲವರಾದ್ದರಿಂದ ಸಮಯದಲ್ಲಿ ರಂಜಕವನ್ನು ಹತ್ತಿಸುವರು. ಇಂಥಾ ಅಲ್ಪರು ಬಳಲಂಚಕ್ಕೆ ಆಶೆಬಿದ್ದು ಸುಳ್ಳನ್ನು ಹೇಳುತಾ ದೊರೆಯಲ್ಲಿ ಮಹಾಮಂತ್ರಿತ್ವದ ಪದವಿಗೆ ಅರ್ಹರೆನ್ನಿಸಿಕೊಳ್ಳುತಾರೆ. ಮುಸಲ್ಮಾನ್ ದೊರೆಗಳಲ್ಲಿಯಂತೂ ರಾಜಸದ ಕೇದು ವಿಶೇಷವಾಗಿರುವುದು.

ವಸೀರಇಲ್ಲದ್ದು

ಈ ರೀತಿಯಲ್ಲಿ ಹೊರಳುತ ನರಳುತಿದ್ದ ನಿಸಾಮನಿಗೆ ಸಿರಾಜುಲ್ ಮುಲ್ಕನ ತರುವಾಯ ಯಾರನ್ನು ಮಂತ್ರಿತ್ವಕ್ಕೆ ನೇಮಿಸಬೇಕೆಂಬ ಯೋಚನೆ ಹತ್ತಿತು. ಜವಾಬುದಾರನಾದ ವಸೀರ ಇಲ್ಲದೆ ರಾಜ್ಯಭಾರವನ್ನು ನಡೆಯಿಸುವುದು ಸರಿಯಲ್ಲವಾದ್ದರಿಂದ ಇಂಥಾ ಸಂದರ್ಭದಲ್ಲಿ ಹಿಂದೆ ಅನೇಕವೇಳೆ ನಡೆದ ಹಾಗೆಯೇ ಈಗಲೂ ವಸೀರನನ್ನು ನೊಕರರು ಮಾಡಬೇಕೆಂದು ರೆಸಿಡೆಂಟರಿಂದ ಬಲವಂತ ಉಂಟಾಗಬೇಕಾಯಿತು.

ಅರಮನೆ ಸಮ್ಮದವರ ತಂತ್ರ

ಈ ಕೆಲಸಕ್ಕೆ ಮುಖ್ಯವಾದವರು ಯಾರು ಎಂದು ಚರ್ಚೆ ಹುಟ್ಟಿತು. ಸಾಲಾರಜಂಗನನ್ನು ನೇಮಿಸುವುದು ನಿಸಾಮನಿಗೆ ಇಷ್ಟವಿರಲಿಲ್ಲ. ಯಾರ ಮಂತ್ರಿತ್ವದಲ್ಲಿ ಬಿರಾರು ರಾಜ್ಯವು ಕೈತಪ್ಪಿ ಹೋಯಿತೋ ಮತ್ತು ಯಾರು ಈ ನಷ್ಟಕ್ಕೆ ಮುಖ್ಯಕಾರಣ ಭೂತನೆಂದು ನಿಸಾಮ ತಿಳಿದುಕೊಂಡಿದ್ದನೋ ಅಂಥಾ ಸಿರಾಜುಲ್ ಮುಲ್ಕನಿಗೆ ಸಾಲಾರಜಂಗನು ಅಣ್ಣನ ಮಗ; ವಯಸ್ಸಿನಲ್ಲಿ ಇನ್ನೂ ಚಿಕ್ಕವನು; ಇಪ್ಪತ್ತುನಾಲ್ಕುವರುಷದ ಹುಡುಗ, ಇವನನ್ನು ವಸೀರಿ ಕೆಲಸಕ್ಕೆ ಇರಿಸಿಕೊಳ್ಳುವುದು ಹೇಗೆ? ಎಂದು ಶಂಕೆಹುಟ್ಟಿತು. ಇವನಿಗೆ ಸರ್ವಾಧಿಕಾರವನ್ನೂ ಒಪ್ಪಿಸಿ ಮಂತ್ರಿತ್ವಕ್ಕೆ ನೇಮಿಸುವ ಭಾಗದಲ್ಲಿ ನಿಸಾಮನಿಗೆ ಇಷ್ಟವಿರಲೇ ಇಲ್ಲ. ಆದರೆ ನಮ್ಮ ಇಷ್ಟಕ್ಕೆ ವಿರೋಧವಾದ ಕೆಲಸಗಳನ್ನು ನಾವು ಒಂದುವೇಳೆ ಮಾಡಲೇಬೇಕಾಗುವುದು. ಈ ಸಂದರ್ಭದಲ್ಲಿ ಒಂದು ವಿಚಿತ್ರವಾದ ಸಂವಿಧಾನ ನಡೆಯಿತು. ನಿಸಾಮನ ಇಷ್ಟಕ್ಕೆ ವಿರೋಧವಾದ ಕಾರ್ಯಗಳನ್ನು ಮಾಡುವುದು ರಾಜನ ಪರಿವಾರ ಸೇವಕರುಗಳು ಮಾತ್ರವಲ್ಲ. ಆದರೆ ದೊರೆಯಾದವನನ್ನು ಇವರುಗಳು ಯಾತಕ್ಕಾಗಿ ಸಂಭಾವಿ

ಸಿದಾರೋ ಅದೇ ಕೆಲಸಕ್ಕಾಗಿಯೇ ಸಾಲಾರಜಂಗನಿಗೆ ವಸೀರಿ ಆಗಬೇಕೆಂದು ಅಪೇಕ್ಷಿಸಿದರು. ನಿಸಾಮನ ಸಮೀಪದಲ್ಲಿ ಶಕ್ತನಾದ ಮಂತ್ರಿ ಯಾರಾದರೂ ಸೇರಿದರೆ ಮೊದಲು ತಮ್ಮ ಬೇರನ್ನು ಸಡಲಿಸಿಯಾನು, ಆದ್ದರಿಂದ ಅಂಥವನು ನೇಮಕವಾಗುವುದು ಯುಕ್ತವಲ್ಲ. ಸಾಲಾರಜಂಗನಾದರೋ ಇನ್ನೂ ಹುಡುಗ, ರಾಜ್ಯಭಾರದ ಅನುಭವ ಲೇಶವೂ ಇಲ್ಲ. ಬೀರಾರನ್ನು ಇವನ ಚಿಕ್ಕಪ್ಪನಾದ ಸಿರಾಜುಲ್ ಮುಲ್ಕನ ಮಂತ್ರಿತ್ವದಲ್ಲಿ ಬ್ರಿಟಿಷ್ ಸರಕಾರದವರಿಗೆ ಒಪ್ಪಿಸಿದ ಕೋಪವು ನಿಸಾಮನ ಮನಸ್ಸಿನಲ್ಲಿ ಸಾಲಾರನ ಮೇಲೆಯೂ ಹೊಗೆಯಾಡುತ್ತಲೇ ಇರುವುದು. ದೊರೆಗೂ ಮಂತ್ರಿಗೂ ಅಂತಃಶುದ್ಧಿ ಇಲ್ಲದಿರುವ ಕಡೆಯೇ ಪರಿವಾರದ ಅಲ್ಪರು ಸ್ವಪ್ರಯೋಜನಕ್ಕಾಗಿ ಮಾಡಿಕೊಳ್ಳಬೇಕಾದ ಕೆಲಸಗಳು ಸುಲಭವಾಗಿ ಜರಗತಕ್ಕದ್ದು. ಮಂತ್ರಿ ವಿರೋಧಿಯಾದರೆ ಧೊರೆಯಲ್ಲಿ ಅವನ ಮೇಲೆ ಕ್ಷುದ್ರಹೇಳಿ ಅವನನ್ನು ಮುರಿದು ತಮ್ಮ ಪ್ರಯೋಜನವನ್ನು ನೋಡಿಕೊಳ್ಳಬಹುದು. ದೊರೆ ವಿರೋಧಿಯಾದರೆ ಮಂತ್ರಿಯ ಮೂಲಕ ತಮ್ಮ ಕೆಲಸವನ್ನು ಗೆದ್ದುಕೊಳ್ಳಬಹುದು. ಆದ್ದರಿಂದ ಪ್ರಕೃತ ಸಂದರ್ಭದಲ್ಲಿ ಹುಡುಗನಾದ ಸಾಲಾರಜಂಗನಿಗೆ ವಸೀರಿಯಾಗುವುದೇ ಒಳ್ಳೇದೆಂದು ಯೋಚಿಸಿದರು.

ದಫ್ತರದಾರ ಲಾಲಾಬಹಾದುರನ ತಂತ್ರ

ಹುಸೂರು ದಫ್ತರದಾರನಾದ ಲಾಲಾಬಹಾದುರನು ಸಿರಾಜುಲ್ ಮುಲ್ಕನ ವಿರೋಧಕಕ್ಷಿಗೆ ಸೇರಿದವನಾದಾಗ್ಯೂ ಅವನ ಅಣ್ಣನ ಮಗನಾದ ತುರಾಬಲ್ಲಿಯ ಪಕ್ಷವನ್ನು ವಹಿಸಿದನು. ನಿಸಾಮನ ಸಮೀಪದಲ್ಲಿ ಯಾವಾಗಲೂ ಇರುತ್ತಾ ಅವನನ್ನು ಕೀಲಿನ

ಬೊಂಬೆಯ ಹಾಗೆ ತಿರುಗಿಸುತಾ ಅನುಗ್ರಹಕ್ಕೆ ವಿಶೇಷವಾಗಿ ಪಾತ್ರರಾಗಿದ್ದ ಬುರಹಾನುದ್ದಿ ಮತ್ತು ಮೂಮುಜಮಿಾಲ ಎಂಬವರಿಬ್ಬರೂ ಲಾಲಾಬಹಾದುರನ ಮಾತನ್ನೇ ಪುಷ್ಟೀಕರಿಸಿದರು. ಚಮತ್ಕಾರಿಗಳಾದ ಇವರು ತಮ್ಮ ಲಕ್ಷ್ಯವನ್ನು ಸರಿಯಾಗಿ ಹೊಡೆಯತಕ್ಕ ಚರ್ಚೆಯಿಂದ ನಿಸಾಮನ ಮನಸ್ಸನ್ನು ತಿರುಗಿಸಿದರು. ಇವರು ಹೇಳಿದ್ದೇನೆಂದರೆ:—

"ಹುಜೂರ್, ಮಂತ್ರಿ ಯಾರಾದರೇನು ? ಅವನು ರಾಜ್ಯಭಾ
"ರದ ಆಡಳತಗಳನ್ನು ನಡಿಸತಕ್ಕದ್ದು ಸನ್ನಿಧಾನದ ಶಕ್ತಿ
"ಯಿಂದ. ಸನ್ನಿಧಾನದಿಂದ ಕೊಡಲ್ಪಟ್ಟ ಅಧಿಕಾರದ ಬಲವಿಲ್ಲ
"ದಿದ್ದರೆ ಅವನಿಂದ ಏನು ನಡೆದೀತು ? ಸಿರಾಜುಲ್ ಮುಲ್ಕ
"ನು ಕಾರಕರ್ದುಗಳನ್ನು ನಡಿಸಿದನಷ್ಟೆ. ಅವನಿಗೆ ಏನು
"ಶಕ್ತಿಯಿತ್ತೋ ಅದು ಸನ್ನಿಧಾನಕ್ಕೆ ಗೊತ್ತೇಇದೆ. ಕೀಳ್ ಪ
"ಟ್ಟ ಅಧಿಕಾರಿಗಳ ಸಹಾಯದಿಂದಲ್ಲವೇ ಎಲ್ಲಾ ಆಡಳತಗ
"ಳೂ ನಡೆಯುತಿದ್ದದು ? ಲಾಲಾಬಹಾದುರನು ಎಲ್ಲಾ ಕೆಲ
"ಸಗಳನ್ನೂ ಸಿರಾಜುಲ್ ಮುಲ್ಕನಿಗಾಗಿ ಮೊದಲು ಹೇಗೆ
"ನಡಿಸುತಾ ಇದ್ದನೋ ಈಗಲೂ ಸಾಲಾರಜಂಗನಿಗಾಗಿ
"ಹಾಗೆಯೇ ನಡಿಸುತಾನೆ. ಇದೂ ಅಲ್ಲದೆ ಸಿರಾಜನು ಯಾ
"ವಾಗಲಾದರೂ ದರಬಾರ್ ವಿಚಾರದಲ್ಲಿ ಸಲಹಾ ಕೇಳಿದಾ
"ಗೆಲ್ಲಾ ಸಾಲಾರಜಂಗನು ದಾಕ್ಷಿಣ್ಯ ನೋಡದೆ ವಿರೋಧವಾದ
"ಅಭಿಪ್ರಾಯವನ್ನೇ ಹೇಳುತಿದ್ದನು. ಚಿಕ್ಕಪ್ಪನಿಗೂ ಮಗ
"ನಿಗೂ ಅಂತಶ್ಶುದ್ಧಿ ಇರಲೇ ಇಲ್ಲ."

ಸಾಲಾರಜಂಗನಿಗೆ ಮಂತ್ರಿತ್ವವಾದ್ದು

ಹೀಗೆ ಈ ಜನರು ಮಾಡಿದ ಅರಿಕೆಯು ನಿಸಾಮನ ಮನಸ್ಸಿಗೆ ಸ್ವಲ್ಪ ಅಂಟಿತು. ಸನ್ ೧೮೫೩ ನೇ ಈಸವಿ ಮೆ ೩೧ ನೇ ತಾರೀಖಿನಲ್ಲಿ ಇಂಗ್ಲಿಷರ ರೆಸಿಡೆಂಟುಸಾಹೇಬನೂ ಮತ್ತು ಇತರ ಉಂದಾಗಳೂ ಸೇರಿದ್ದ ದೊಡ್ಡ ದರಬಾರಿನಲ್ಲಿ ಸಾಲಾರ್‌ಜಂಗನನ್ನು ವಸೀರನನ್ನಾಗಿ ನೇಮಿಸಿ ಖಿಲ್ಲತ್ತನ್ನು ಕೊಟ್ಟರು. ಈ ಭಾಗದಲ್ಲಿ ಲಾಲಾಬಹಾದುರ್ ಮೊದಲಾದವರ ಇಷ್ಟ ನೆರವೇರಿದಂತೆಯೇ ಆಯಿತು.

ಸಾಲಾರಜಂಗನಿಗೂ ಲಾಲಾಬಹಾದುರನಿಗೂ ವಿರೋಧವಾದ್ದು

ಆದರೆ ಲಾಲಾ ಬಹಾದುರನಾದ ತನ್ನ ಸಾಹಸದಿಂದ ಮಂತ್ರಿಯಾಗಿ ನೇಮಕಮಾಡಲ್ಪಟ್ಟ ಸಾಲಾರಜಂಗನು ಸಿರಾಜುಲ್ ಮುಲ್ಕನಲ್ಲಿ ಸಲಹೆಗಳನ್ನು ಕೊಟ್ಟುಕೊಂಡು ಓಡಿಯಾಡುತಾಇದ್ದ ಸಾಲಾರಜಂಗನೇ ಆಗಿರುತಾನೆಂತಲೂ, ಈ ಯವ್ವನಸನನ್ನು ವಸೀರನನ್ನಾಗಿ ನೇಮಕಮಾಡಿಸುವುದರಲ್ಲಿ ನಿಸಾಮನ ಕಿವಿಯನ್ನು ಕಚ್ಚಿಕೊಂಡಿರುವ ತನ್ನ ಕಾರಕುರ್ದು ಇನ್ನೂ ಹೆಚ್ಚಿ ತನ್ನಸ್ಥಾನಬಲವು ಗಟ್ಟಿಯಾದೀತೆಂತಲೂ ಲಾಲಾಬಹಾದುರನು ತಿಳಿದುಕೊಂಡಿದ್ದಲ್ಲಿ ಅದು ತಪ್ಪುತಿಳುವಳಿಕೆ ಎಂದು ಹೇಳಲು ಸಂಶಯವೇನೂ ಇಲ್ಲ. ಯಾಕೆಂದರೆ ಕೆಲವು ವಾರಗಳೊಳಗಾಗಿ ಅನಾನುಭವಿಯಾದರೂ ಪ್ರಾಮಾಣಿಕನಾಗಿದ್ದ ಮಂತ್ರಿಗೂ ಆಸ್ಥಾನದ ಕೃತ್ರಿಮಗಳಲ್ಲಿ ಮೊದಲಿನಿಂದಲೂ ಅಭ್ಯಾಸ ಉಳ್ಳ ಆ ಮುದಕನಾದ ದಫ್ತರದಾರನಿಗೂ ಭಿನ್ನಾಭಿಪ್ರಾಯ ಹುಟ್ಟಲು ಮೊದಲಾಯಿತು. ಒಂದು ದಿನ ಲಾಲಾಬಹಾದುರನು ಕೆಲವು ಕಾಗದಗಳನ್ನು ತಂದು ದೀವಾನನಮುಂದೆ ಇಟ್ಟು ಅದ

ಕ್ಕೆ ರುಜು ಹಾಕಬೇಕೆಂದು ಹೇಳಿದನು. ತಾನು ಆ ಕಾಗದಗ
ಳಲ್ಲಿ ಏನಿದೆಯೋ ಅದನ್ನು ನೋಡಿ ತಿಳಿದುಕೊಂಡು ಸೂಕ್ತವಾ
ಗಿದ್ದರೆ ರುಜುಹಾಕುತೇನೆ ಇಲ್ಲವಾದರೆ ಹಾಕುವುದಿಲ್ಲವೆಂದು ಮಂ
ತ್ರಿಯು ಹೇಳಿದನು. ತನ್ನ ಮನಸ್ಸಿಗೆ ಬಂದದನ್ನು ಬರೆದು ತಂದು
ಮುನಷೀಯು ಮುಂದಿಟ್ಟರೆ ಅದನ್ನು ನೋಡದೆ ಏನೆಂದು ವಿಚಾ
ರಿಸದೆ ತನ್ನ ಸಹಿ ಹಾಕುವ ಮಟ್ಟಿನ ಅವಿವೇಕವು ಸಾಲಾರ
ಜಂಗನಲ್ಲಿರಲಿಲ್ಲ. ಮಂತ್ರಿಗೂ ದಫ್ತರದಾರನಿಗೂ ಆ ದಿವಸ ಹು
ಟ್ಟಿದ ಮನಸ್ತಾಪ ನಿಸಾಂನಸೀರುದ್ದೌಲ ಜೀವಂತನಾಗಿರುವ
ವರೆಗೂ ಇತ್ತು. ಆಮೇಲೂ ಅದು ಹೋಗಲಿಲ್ಲ. ಮಂತ್ರಿಯು
ಎಷ್ಟೇಶಕ್ತನಾಗಲಿ ಪ್ರಾಮಾಣಿಕನಾಗಲಿ ದೇಶಾಭಿಮಾನಿಯಾಗಲಿ,
ದೊರೆಯು ಎಲ್ಲಿನವರೆಗೆ ಈ ಚಿಲ್ಲರೇ ಭೃತ್ಯರು ಹೇಳುವ ಸಮಾ
ಚಾರವನ್ನು ಆದರಿಸಿ ಕೇಳಿ ನಂಬುತಾನೆಯೋ ಅಲ್ಲಿನವರೆಗೆ ಮಂ
ತ್ರಿಗೆ ಉಳಿಗಾಲವಿಲ್ಲ. ಒಂದು ದೊಡ್ಡಬಂಡೆಯು ಅವನ ತಲೆಯ
ಮೇಲೆ ಬೀಳಲು ಕಾದುಕೊಂಡೇ ಇರುವುದು. ಅಂಥಾ ಅಮಾ
ತ್ಯನ ಅಧಿಕಾರವು ನೀರಮೇಲಿನ ಗುಳ್ಳೆಯಹಾಗೆ ಕ್ಷಣಭಂಗುರ
ವಾಗುವುದು. ಇಲಾಖೆಗಳೆಲ್ಲವನ್ನೂ ಹೊಸರೀತಿಯಲ್ಲಿ ಕ್ರಮಪ
ಡಿಸಿ ಏರ್ಪಾಡು ಮಾಡಬೇಕೆಂದು ಸಾಲಾರಜಂಗನ ಮನಸ್ಸಿನಲ್ಲಿದ್ದ
ಕೋರಿಕೆಯು ಇವನ ಅಧಿಕಾರ ಹಲವು ದಿವಸ ನಡೆಯುವುದಕ್ಕೆ
ಪ್ರತಿಬಂಧಕವಾಗಿತ್ತು. ವಿಷಯ ತಿಳಿಯದೇ ಹೋಗೋಣವು ಅಥ
ವಾ ಅಲ್ಪತಿಳುವಳಿಕೆಯಾಗೋಣವು ಮನಸ್ಸಿನಲ್ಲಿ ಅನುಮಾನವನ್ನು
ಹುಟ್ಟಿಸುವುದಕ್ಕೆ ಒಳ್ಳೇ ಕಾರಣವಾಗುವುದು. ಇಂಥಾ ಹೊಸ
ಏರ್ಪಾಡುಗಳ ಮರೆಯಲ್ಲಿ ನಿಸಾಮನನ್ನು ಬ್ರಿಟಿಷ್ ಸರ್ಕಾರದ
ಗುಲಾಂಗಿರಿಗೆ ತರಬೇಕೆಂದು ಈ ಮಂತ್ರಿಯು ಯೋಚಿಸಿದಾನೆಂ
ಬದಾಗಿ ಅಪಾರ್ಥವನ್ನು ಕಲ್ಪಿಸುವುದು ಸುಲಭವಾಗಿತ್ತು. ಇವ

ನನ್ನು ಮಂತ್ರಿತ್ವದಿಂದ ತೆಗೆದುಬಿಡಬೇಕೆಂಬ ಸಂದರ್ಭವು ಆಗಾಗ್ಯೆ ಹುಟ್ಟುತ್ತಲೇ ಇತ್ತು. ಮಂತ್ರಿಯು ಪದೇಪದೇ ತನ್ನ ಕೆಲಸಕ್ಕೆ ರಾಜೀನಾಮೇ ಕೊಡುತೇನೆಂಬ ಅಸಮಧಾನಕರವಾದ ಮಾರ್ಗಕ್ಕೆ ಹೊಕ್ಕು ತನ್ನ ಹಠವನ್ನು ಗೆಲ್ಲುತಿದ್ದನು.

ನಿಜಾಮನ ಅಸಮಾಧಾನ

ಸಾಲಾರಜಂಗನನ್ನು ವಜೀರಿಉದ್ಯೋಗಕ್ಕೆ ನೇಮಿಸುವಾಗ ನಿಜಾಮನಿಗೆ ವಿಶೇಷವಾಗಿ ಅನುಮಾನವಿದ್ದ ಸಂಗತಿ ಮೇಲೆ ಕಾಣಿಸಿದೆಯಷ್ಟೆ. ಈಚೆಗೆ ಪರಿವಾರದೇವತೆಗಳು ನಡಿಸುತಾ ಇದ್ದ ಅಂತರಂಗದ ಕೃತ್ರಿಮಗಳು ಅವನ ಮನಸ್ಸನ್ನು ಇನ್ನೂ ಕೆಡಿಸಿದವು. ಬಿರಾರು ಕೈತಪ್ಪಿಹೋದ್ದು ಒಂದು ಅಸಮಾಧಾನ, ಮಂತ್ರಿಯು ಪರಾಡುಗಳನ್ನು ಮಾಡಬೇಕೆಂದು ಹೇಳುವುದು ಒಂದು ಅಸಮಾಧಾನ, ತನ್ನ ಮಂತ್ರಿಯು ಪ್ರಬಲಿಸುತಾ ಇದಾನಲ್ಲಾ ಎಂಬ ಅಸೂಯೆಯು ಅಸಮಾಧಾನ, ಇವೆಲ್ಲಾ ಒಟ್ಟಿಗೆ ಸೇರಿದವು. ಇದರಿಂದ ವಜೀರನು ಹೈದರಾಬಾದನ್ನು ಬಿಟ್ಟು ಹೊರಗೆ ಎಲ್ಲಿಗೆ ಹೋಗುವುದೂ ಧಣಿಗೆ ಇಷ್ಟವಾಗಿರಲಿಲ್ಲ.

—o—

# ೪ನೇ ಅಧ್ಯಾಯ.

## ಮಹಾದಂಗೆ.

ನಿಸಾಮ ಫಸಲುದ್ದೌಲನಿಗೆ ಅಸಮಾಧಾನ.

ಸನ್ ೧೮೫೭ ನೇ ಈಸವಿ ಮೇ ತಿಂಗಳು ೧೮ರಲ್ಲಿ ನಸೀರುದ್ದೌಲನು ಕಾಲವಾದನು. ಇವನ ತರುವಾಯ ಈತನ ಮಗನಾದ ಅಫಸಲ್ಲುದ್ದೌಲನಿಗೆ ಪಟ್ಟವಾಯಿತು. ನಿಸಾಂನಸೀರುದ್ದೌಲನು ಸಾಯುವ ಕಾಲದಲ್ಲಿ ತನ್ನ ಷಹಸಾದೆಯನ್ನು ಕುರಿತು— ಯಾವ ಕಾಟಕಾಯ ಬಂದರೂ ನೀನು ಇಂಗ್ಲೀಷರ ಪಕ್ಷದಲ್ಲಿಯೇ ಇರು ಎಂದು ಬುದ್ಧಿಯನ್ನು ಹೇಳಿ ಮೃತಪಟ್ಟನು. ಆದರೆ ಈ ಹೊಸದೊರೆಗೆ ಸಾಲಾರಜಂಗನಲ್ಲಿ ತಮ್ಮ ತಂದೆಗೆ ಇದ್ದದಕ್ಕಿಂತಲೂ ಹೆಚ್ಚಾದ ಅಪನಂಬಿಕೆಯಿತ್ತು. ಹೊಸಬದಲಾವಣೆಗೆ ಇವನು ತಂದೆಗಿಂತಲೂ ಹೆಚ್ಚಾದ ವಿರೋಧಿ. ತನ್ನ ಮಂತ್ರಿಯನ್ನು ಕಂಡರೆ ಆಗದು. ಸಾಲಾರಜಂಗನು ತನ್ನ ಅಪ್ಪಣೆವಿನಾ ಹೈದರಾಬಾದನ್ನು ಬಿಟ್ಟು ಹೊರಕ್ಕೆ ಹೋಗಕೂಡದೆಂದ ನಿರ್ಬಂಧವಾಡಿದ್ದನು. ವಸೀರನು ಅದೇವೂರಲ್ಲಿದ್ದ ರೆಸಿಡೆಂಟು ಸಾಹೇಬರನ್ನು ಹೋಗಿನೋಡಬೇಕಾಗಿದ್ದಲ್ಲಿ ತನ್ನ ಅಪ್ಪಣೆಯನ್ನು ಪಡೆಯುವುದಕ್ಕೆ ಮುಂಚೆ ಹೋಗಕೂಡದೆಂದು ಆಜ್ಞೆಮಾಡಿದ್ದನು. ಸನ್ ೧೮೬೧ ರಲ್ಲಿ ನಿಸಾಮನು ಮಂತ್ರಿಯನ್ನು ಕೆಲಸದಿಂದ ತೆಗೆದು ಬಿಡಬೇಕೆಂದು ಯೋಚಿಸಿದ್ದನು. ಆದರೆ ರೆಸಿಡೆಂಟು ಸಾಹೇಬನು ಮಾಧ್ಯಸ್ಥಕ್ಕೆ ಬಂದು ನಿಸಾಮನಿಗೆ ಸಮಾಧಾನ ಹೇಳಿದನು. ಸನ್ ೧೮೬೭ ರಲ್ಲಿ ದೊರೆಮಂತ್ರಿಗಳ ಸಂಬಂಧ ಇನ್ನೂ ರಸಾಭಾಸಕ್ಕೆ ಇಟ್ಟಿತು. ಸಾಲಾರಜಂಗನು ಕೆಲಸಕ್ಕೆ ರಾಜಿನಾಮೆಯನ್ನು

ಕಳುಹಿಸಿದನು. ಆಗಲೂ ರೆಸಿಡೆಂಟು ಸಾಹೇಬನು ಮಧ್ಯೆನಿಂತು ಸಮಾಧಾನ ಮಾಡಿದನು.

ಸುನ್ನಿ, ಷಿಯಾ

ಮತ್ತು ಸಾಲಾರಜಂಗನು ಷಿಯಾಪಂಗಡಕ್ಕೆ ಸೇರಿದವನು. ನಿಸಾಮನು ಸುನ್ನಿಪಂಗಡಕ್ಕೆ ಸೇರಿದವನು. ಸುನ್ನಿಗಳಿಗೂ ಷಿಯಾಗಳಿಗೂ ಮತವಿಷಯದಲ್ಲಿ ಮೊದಲಿನಿಂದಲೂ ವೈರವಿದ್ದೇ ಇದೆ. ಮಂತ್ರಿಗೆ ಮತಸಂಬಂಧವಾದ ದ್ವೇಷವೇನೂ ಇಲ್ಲದೇ ಇದ್ದಾಗ್ಯೂ ಇವನು ಪರಮತಕ್ಕೆ ಸೇರಿದವನು ಎಂಬ ಒಂದು ದ್ವೇಷವೇ ಸಾಕಾಗಿತ್ತು.

ಪೈಗಾದಾರರು

ದೊರೆಗೆ ಸೇರಿದ ಖಾಸಾಜಹಗೀರುಗಳು, ಯುದ್ಧಪ್ರಮೇಯದಲ್ಲಿ ತಮ್ಮ ದಂಡನ್ನು ತೆಗೆದುಕೊಂಡು ಬಂದು ನಿಸಾಮನಿಗೆ ಸಹಾಯಮಾಡತಕ್ಕ ನಿಸಾಮನ ಸಂಬಂಧಿಗಳು ಮತ್ತು ಅರಬ್ಬರು, ಈ ಬಗೆ ಪೈಗಾದಾರರ ಗ್ರಾಮಗಳು, ಈ ಸ್ಥಳಗಳಲ್ಲಿರತಕ್ಕ ಜನರು ಯಾರೂ ಸಿವಿಲ್ ಮತ್ತು ಕ್ರಿಮಿನಲ್ ಕೋರ್ಟುಗಳ ಅಧಿಕಾರಕ್ಕೆ ಒಳಪಟ್ಟಿರಕೂಡದೆಂದು ಹೈದರಾಬಾದು ಸೀಮೆಯಲ್ಲಿ ಮೊದಲಿನಿಂದಲೂ ಒಂದು ಪದ್ಧತಿಯಿತ್ತು. ಇದರಿಂದ ತಕ್ಕ ಪೋಲೀಸ್ ಏರ್ಪಾಡುಗಳನ್ನು ಮಾಡಿ ಅಪರಾಧಿಗಳಿಗೆ ಶಿಕ್ಷೆಮಾಡಿಸುವುದು ಅಸಾಧ್ಯವಾಗಿತ್ತು.

ಪೂರ್ವದಹಕ್ಕುದಾರರು

ಕೆಲವು ಪೂರ್ವದ ಹಕ್ಕುದಾರರ ಮತ್ತು ಅರಬ್ಬಿಸಾಹುಕಾರರ ತಗಾದೆಗಳು ಫೈಸಲಾಗಬೇಕಾಗಿತ್ತು. ಪೂರ್ವದಲ್ಲಿ ಈ ಅರಬ್ಬರಿಗೆ ಜೀವನಕ್ಕಾಗಿ ಕೆಲವು ಗ್ರಾಮಗಳನ್ನು ಉಂಬಳಿ ಇನಾಮಾಗಿ ಕೊಟ್ಟಿದ್ದರು. ಕೆಲವು ಸಂದರ್ಭದಲ್ಲಿ ಈ ಇನಾಂಗ್ರಾಮಗಳು ಆಯಾ ಉಂಬಳಿದಾರರಿಗೇ ಅಡುವಾಗಿದವು. ಇಂಥಾ ಗ್ರಾಮಗಳನ್ನು ಬಿಡಿ

ಸಿಕೊಳ್ಳುವುದು ಕಷ್ಟವಾಗಿತ್ತು. ಜನರ ಹಾರಾಟ ಬಲವಾಗಲು ದಂಡಿನವರ ಭಯವನ್ನು ಇವರಿಗೆ ತೋರಿಸಬೇಕಾಗಿತ್ತು.

ದೇಶಾಂತರದ ಪುಂಡುಗಾರರು

ಇದೂ ಅಲ್ಲದೆ ಎಲ್ಲೆಲ್ಲಿ ಯಿಂದಲೋ ಬಂದು ಹೈದರಾಬಾದಿನಲ್ಲಿ ಸೇರಿಕೊಂಡಿದ್ದ ಪುಂಡು ಜನರ ಹಾವಳಿಯನ್ನು ಅಡಗಿಸುವುದು ದುಸ್ತರವಾಗಿತ್ತು. ಮತ್ತು ಇದರ ಜೊತೆಗೆ ಅರಮನೆಯಲ್ಲಿ ಮಂತ್ರಿಯ ಏಳಿಗೆಯನ್ನು ನೋಡಿ ಸಹಿಸಲಾರದ ಹೊಟ್ಟೇಕಿಚ್ಚಿನ ಶಾಖ ಬೇರೇ ತಡೆಯಲು ಅಸಾಧ್ಯವಾಗಿತ್ತು.

ಸಿಪಾಯಿಗಳ ದಂಗೆ

ಇಷ್ಟು ಕಷ್ಟವನ್ನಾದರೂ ಪಟ್ಟುಕೊಂಡು ರಾಜ್ಯದಲ್ಲಿ ಬಿಗಿಯಾದ ಆಡಳಿತವನ್ನು ನಡಿಸಲು ತಕ್ಕ ಏರ್ಪಾಡುಗಳನ್ನು ಮಾಡಬೇಕೆಂದು ಸಾಲಾರಜಂಗನು ತೊಡಗಿದ ಕೂಡಲೆ ಇನ್ನೊಂದು ದೊಡ್ಡ ಗಲಭೆ ಉಂಟಾಯಿತು. ಸಾಲಾರಜಂಗನಿಗೆ ವಜೀರ ಕೆಲಸವಾಗಿ ಇನ್ನೂ ನಾಲ್ಕುವರುಷದ ಮಟ್ಟಿಗೆ ಕಳೆದಿತ್ತು. ಆಗ ಬ್ರಿಟಿಷ್ ಸರ್ಕಾರದವರ ದಂಡಿನ ಸಿಪಾಯಿಗಳೆಲ್ಲಾ ಉತ್ತರದೇಶದಲ್ಲಿ ಒಂದೇ ಉಸಿರಿಗೆ ದಂಗೆಎದ್ದು ದೊಡ್ಡಪಟ್ಟಣಗಳನ್ನೆಲ್ಲಾ ಹಿಡಿದುಕೊಂಡರು. ಇದಕ್ಕೆ ಸಿಪಾಯಿಗಳ ದಂಗೆಎಂತಲೂ ಹೆಸರಾಗಿದೆ. ದಿಲ್ಲಿ ಚಕ್ರವರ್ತಿಗಳ ವಂಶಸ್ಥನಾದ ನಾಮಮಾತ್ರದ ಚಕ್ರವರ್ತಿ, ಕೆಲವು ರಾಜವಾಡೆಯವರು, ಮುಖಂಡರಾದ ಅನೇಕ ಜನರು, ಇವರೆಲ್ಲರೂ ಇದಕ್ಕೆ ಸೇರಿದ್ದರು. ಉತ್ತರದಲ್ಲಿ ಗಾಗಳ ಬಹಳವಾಗಿ ಆಯಿತು. ದಂಗೆಯವರು ಉತ್ತರದಲ್ಲಿ ದೊಡ್ಡಪಟ್ಟಣಗಳನ್ನು ಹಿಡಿದುಕೊಂಡರು. ದಿಲ್ಲಿಯನ್ನು ದಂಗೆಯವರು ಹಿಡಿದುಕೊಂಡರೆಂಬ ವರ್ತಮಾನವು ದಕ್ಷಿಣದೇಶವನ್ನು ಮುಟ್ಟಿತು. ಬೊಂಬಾಯಿ ಗವರ್ನರಾದ

ಲಾರ್ಡಎಲ್‌ಫಿನ್‌ಸ್ಟನ್ನನು “ ನಿಜಾಮು ಹೋದರೆ ಎಲ್ಲಾ ಹೋಯಿತು. ” ಎಂದು ಹೈದರಾಬಾದಿನ ರೆಸಿಡೆಂಟನಿಗೆ ತಂತಿವರ್ತಮಾನವನ್ನು ಕೊಟ್ಟನು. ಕಡೆಗೂ ನಿಜಾಮನು ಎದುರು ಕಕ್ಷಿಗೆ ಸೇರಿಕೊಳ್ಳಲಿಲ್ಲ. ಇಂಗ್ಲಿಷರಿಗೇ ಸಹಾಯವನ್ನು ಮಾಡಿದನು. ತನಗೆ ಯೇನಾದರೂ ಸಂಭವಿಸಲಿ, ಬ್ರಿಟಿಷ್ ಸರ್ಕಾರದವರಿಗೇ ಸಹಾಯಮಾಡಬೇಕೆಂದು ಶಪಥಮಾಡಿಕೊಂಡಿದ್ದ ಸಾಲಾರಜಂಗನ ನಿಶ್ಚಲವಾದ ಹಠವೂ, ಇದೇ ಅರ್ಥಕ್ಕೆ ಈತನು ನಿಜಾಮನಿಗೆ ಅರಿಕೇಮಾಡಿದ ಮಂತ್ರಾಲೋಚನೆಯೂ ಇಂಡಿಯಾದೇಶದಲ್ಲಿ ಇಂಗ್ಲಿಷರ ಅಧಿಕಾರವನ್ನು ಉಳಿಸಿದವು.

ದಂಗೆ ವಿಷಯ ತಿಳಿದದ್ದು.

ಈ ವಿಷಯದಲ್ಲಿ ಸಾಲಾರಜಂಗನಿಗೆ ಮೊದಲಿನಿಂದ ಇದ್ದ ಮನೋನಿಶ್ಚಿಯವು ರೆಸಿಡೆಂಟಾದ ಕರ್ನಲ್ ಡೇವಿಡ್ ಸರ್ ಸಾಹೇಬನಿಗೆ ಗೊತ್ತಿತ್ತು. ಅಫಸಲ್ ಉದ್ದೌಲನನ್ನು ೧೮೫೭ ರಲ್ಲಿ ಒಂದು ದಿನ ಗಾದಿಯಮೇಲೆ ಕೂರಿಸಿ ಆಗ ಆದ ವಿಭವವನ್ನೆಲ್ಲಾ ನೋಡಿಕೊಂಡು ರೆಸಿಡೆಂಟುಸಾಹೇಬನು ಬಂಗಲೆಗೆ ಬಂದಕೂಡಲೆ, ಲಕ್ನೋಪಟ್ಟಣದಲ್ಲಿ ಹೆಚ್ಚಾಗಿ ಗಲಾಟೆಯಾಗಿದೆ ಎಂಬ ಸಮಾಚಾರ ತಿಳಿಯಿತು. ಈ ಸಂಗತಿಯನ್ನು ರೆಸಿಡಿಂಟುಸಾಹೇಬನು ಸಾಲಾರಜಂಗನಿಗೆ ತಿಳಿಸಲಾಗಿ, ಆ ಮಂತ್ರಿಯು ಮೂರು ದಿನಕ್ಕೆ ಮುಂಚೆಯೇ ಈ ವಿಷಯವು ಈ ವೂರಿಗೆ ತಿಳಿದಿತ್ತು, ಎಂದು ಹೇಳಿದನು. ಆ ವಸೀರನು ನಿಜಾಮನ ಪಟ್ಟಾಭಿಷೇಕ ಕಾಲದಲ್ಲಿ ಅರಮನೆಯಲ್ಲಿಯೇ ದಂಗೆ ಜನರಪರವಾಗಿ ಪಕ್ಷಾಸ್ತ್ರಾಪನನ್ನು ಸ್ವಲ್ಪ ಊದಿದ್ದರೆ ಆಗ ಅರಮನೆಯಲ್ಲಿ ಸೇರಿದ್ದ ಇಂಗ್ಲೀಷ್ ಸರದಾರರ ಗತಿಯೇನಾಗಬೇಕು ? ಈ ಗಲಾಟೆಯ ವರ್ತಮಾನ ಮೂರು ದಿವಸಕ್ಕೆ ಮುಂ

ಚೆಯೇ ತಿಳಿದಿದ್ದರೂ ಕೂಡ, ಸ್ವಲ್ಪವೂ ಗಾಬರಿ ಇಲ್ಲದೆ ಮುಂದೆ ಮಾಡಬೇಕಾದ ರಾಜಕಾರ್ಯಗಳನ್ನು ಸಿಧಾನವಾಗಿ ಯೋಚಿಸಿಕೊಳ್ಳುತಾ ದೂರದೃಷ್ಟಿಯಿಂದ ಸಾಲಾರಜಂಗನು ಮನಸ್ಸನ್ನು ಒಂದು ಸ್ಥಿತಿಗೆ ನಿಲ್ಲಿಸಿಕೊಂಡು ಇರಲಿಕ್ಕಾಗಿ, ಹೈದರಾಬಾದು ಷಹರಿನಲ್ಲಿದ್ದ ಕೆಲವು ಜನರು ಹುಚ್ಚಿಗೆ ಧೂಪವನ್ನು ಹಾಕಿ ಮುಸಲ್ಮಾನ ಮತಕ್ಕೇ ದೊಡ್ಡ ಕೇಡು ಸಂಭವಿಸಿದೆಯೆಂದು ಅರಿಯದವರಿಗೆ ದುಬೋ೯ಧೆಯನ್ನು ಮಾಡಿದರು. ಇದು ಬೂದಿ ಮುಚ್ಚಿದ ಕೆಂಡವಾಗಿ ಮುಸಲ್ಮಾನರ ಮನಸ್ಸಿನೊಳಗೆ ಹೊಗೆಯಾಡುತಾ ಇದ್ದದು ಈಚೆಗೆ ಬಿತ್ತು. ಅದೇ ೧೮೫೭ನೆ ಈಸವಿಯ ಜೂ೯ ೧೨ನೇ ತಾರೀಖಿನ ಬೆಳಿಗ್ಗೆ ನೋಡುವಾಗ್ಯೆ ಹೈದರಾಬಾದಿನ ಮುಖ್ಯವಾದ ಸ್ಥಳಗಳಲ್ಲಿ ಕಾಗದಗಳನ್ನು ಬರೆದು ಅಂಟಿಸಿದ್ದರು. ಆ ಕಾಗದಗಳಲ್ಲಿ "ಜನರೆಲ್ಲರೂ ಒಟ್ಟಾಗಿ ಇಂಗ್ಲಿಷರ ಮೇಲೆ ದಂಗೆ ಎದ್ದು ಅವರು ಇಲ್ಲಿನ ಜನಕ್ಕೂ ಮತಕ್ಕೂ ಮಾಡಿರುವ ದ್ರೋಹಕ್ಕಾಗಿ ಈ ಸಮಯಲ್ಲಿ ಅವರಿಗೆ ಪ್ರತಿಕ್ರಿಯೆಯನ್ನು ಮಾಡಿ" ಎಂದು ಬರೆದಿತ್ತು. ಜನರೆಲ್ಲರೂ ಇದನ್ನು ನೋಡಿ ಅರ್ಥಮಾಡಿಕೊಂಡರು. ಎಲ್ಲಾ ಜನರ ಮನಸ್ಸಿನಲ್ಲಿಯೂ ಈ ಅಭಿಪ್ರಾಯ ನನೆಕೊಂಡಿತ್ತು. ಮಾರನೇ ಶುಕ್ರವಾರ ಹೈದರಾಬಾದಿನಲ್ಲಿರತಕ್ಕ ಮಕ್ಕಾಮಸೀತಿಯಲ್ಲಿ ಅನೇಕ ಜನ ಮುಸಲ್ಮಾನರು ನಮಾಸಿಗಾಗಿ ಸೇರಿರುವಾಗ, ಇಬ್ಬರು ತುರುಕರು ಮತವಿಷಯವಾಗಿ ಉಪನ್ಯಾಸಮಾಡುತಾ ಇದ್ದ ಖಾಸಿಯನ್ನು ಕುರಿತು—ಏನು ಮುದುಕಿಯಹಾಗೆ ಬೊಗಳುತೀಯೆ, ನಮ್ಮ ಮತದ ಧ್ವಜವನ್ನು ಎತ್ತಿ ನಮ್ಮ ಮತದ ಶತ್ರು

ದಂಗೆ ಸಂಬಂಧದಲ್ಲಿ ಹೈದರಾಬಾದಿನಲ್ಲಿಗಲಭೆ.

ಮಕ್ಕಾಮಸೀತಿಯಲ್ಲಿ ಗಲಾಟೆ.

ಗಳಾದ ಪರಮತಸ್ಥರನ್ನು ಅಡಗಿಸು" ಎಂದು ಕೂಗಿದರು. ಅಲ್ಲಿ ಸೇರಿದ್ದ ಬೇಕಾರ್ ಜನ ಕೆಲವರು "ದೀ಼, ದೀ಼'' ಎಂದು ಕೂಗಿಕೊಂಡರು. ಅಲ್ಪಜನರೆಲ್ಲಾ ವಿಶೇಷವಾಗಿ ಪುಂಡುಮಾಡಲು ಮೊದಲಾಯಿತು. ಮರ್ಯ್ಯಾದಸ್ಥರಾದ ಜನರು ಯಾರೂ ಇವರ ಸಂಗಡ ಸೇರಲಿಲ್ಲ. ಆದ್ದರಿಂದ ಆಗಿನ ಮಟ್ಟಿಗೆ ಜನರು ಕೂಗಿಕೊಂಡು ಗುಂಪುಗುಂಪಾಗಿ ಸುಮ್ಮನೆ ಹೊರಟುಹೋದರು. ಅದೇ ದಿವಸ ರಾತ್ರೆ ಮಸೀತಿಯಲ್ಲಿ ಹೀಗೆಯೇ ಗಜಾಲು ನಡೆಯಿತು. ವಸ್ಥೀರನ ಅಪ್ಪಣೇಮೇಲೆ ಹಗಲೇ ಇರಿಸಲ್ಪಟ್ಟಿದ್ದ ಅರಬ್ಬಿ ತುಕಡಿಯುವರು ಆರಾತ್ರೆ ಈ ಪುಂಡುಜನರನ್ನು ಚದುರಿಸಿಬಿಟ್ಟರು. ರೆಸಿಡೆಂಟ್ ಸಾಹೇಬರ ಬಂಗಲೇ ಬಾಗಿಲಲ್ಲಿ ಮುಂಜಾಗ್ರತೆಯಿಂದ ಫಿರಂಗಿಗಳನ್ನು ಇಡಿಸಿದ್ದರು. ಸೆಕಂದರಾಬಾದಿನಲ್ಲಿರುವ ಸಿಪಾಯಿ ರೆಜಿಮೆಂಟುಗಳಿಗೂ ಇಂಗ್ಲಿಷರ ಮೇಲೆ ಕೇವಲ ಅಸಮಾಧಾನ ಹುಟ್ಟಿ ದಂಗೆ ಏಳುವ ಸಂಭವವಿತ್ತು. ಅವರುಗಳನ್ನೂ, ಇತರ ಗುಮಾನಿ ಜನರನ್ನೂ ಹೈದರಾಬಾದಿನ ಪಟ್ಟಣದೊಳಕ್ಕೆ ಬಿಡದೆ ಗಲಾಟೆ ಇಲ್ಲದಂತೆ ಮಾಡಲು ಮಂತ್ರಿಯ ಅಪ್ಪಣೇ ಮೇರಿಗೆ ಪಹರೇದವರನ್ನು ಇಟ್ಟಿದ್ದರು. ಆದರೂ ಷಹರಿನ ಸಂದುಗೊಂದುಗಳಲ್ಲಿ ದುಷ್ಟತನದ ಆಟೋಪವು ಹೊಗೆಯಾಡುತಾ ಇತ್ತು.

ಸೆಕಂದರಾಬಾದು.

ಔರಂಗಾಬಾದಿನಲ್ಲಿದ್ದ ರಿಸಾಲೆದಂಡಿನವರು ಪುಂಡು ಮಾಡಿದರು. ಮಂತ್ರಿಯು ಅವರಲ್ಲಿ ಮುಖಂಡರಾದವರನ್ನು ಹಿಡಿಸಿ ಶಿರಚ್ಛೇದನ ಮಾಡಿಸಿದನು. ನಿಸಾಂ ಸರ್ಕಾರವು ತಮ್ಮನ್ನು ಕಾಪಾಡಬಹುದೆಂದು ಉಳಿದ ಪುಂಡಿಜನರು ತಿಳಿದು ಹೈದರಾಬಾದಿಗೆ ಓಡಿಹೋದರು. ಅಲ್ಲಿ ಇದನ್ನು ಪರೀಕ್ಷಿಸಿಕೊಂಡಿದ್ದ ಸಾಲಾರಜಂಗನು ಆ ಜನರನ್ನು

ಹಿಡಿಸಿ ರೆಸಿಡೆಂಟಿಗೆ ಒಪ್ಪಿಸಿದನು. ಇದು ಶುದ್ಧವಾಗಿ ದ್ರೋಹ ಚಿಂತೆ ಎಂದು ಕೊಳ್ಳುತಾ ವಸೀರನನ್ನು ಬೈಯುತಾ ತಃಕವಿಲ್ಲದ ಕೆಲವು ಅಲ್ಪರಾದ ತುರುಕರು ದೊಡ್ಡದಾಗಿ ಗಲಾಟೆಯನ್ನು ಎಬ್ಬಿಸಿದರು.

ಮಕ್ಕಾಮಸೀತಿ ಗಲಾಟೆ

ಸರ್ ೧೮೫೩ ನೇ ಈಸವಿ ಜುಲೈ ೧೫ನೇ, ಶುಕ್ರವಾರದ ದಿವಸ ಮಕ್ಕಾ ಮಸೀತಿಯಲ್ಲಿ ಅನೇಕ ಜನ ಸೇರಿತು. ಈ ಜನರು ನಾಲ್ಕು ಜನ ಮೌಲ್ವಿಗಳನ್ನು ಉತ್ಸವಮಾಡಿಕೊಂಡು ನಿಸಾಮನ ಬಳಿಗೆ ಕರೆದುತಂದು ಮುಸಲ್ಮಾನ್ ಪಾದಷಹನು ಮಾಡಬೇಕಾದ ಕರ್ತವ್ಯಗಳನ್ನು ಆ ಮೌಲ್ವಿಗಳ ಮೂಲಕ ಹೇಳಿಸಿ, ಸರ್ಕಾರದವರು ರೆಸಿಡೆಂಟನ ವಶಕ್ಕೆ ಹಿಡಿದುಕೊಟ್ಟ ಸಿಪಾಯಿಗಳನ್ನು ಬಿಟ್ಟುಕೊಡಬೇಕು, ಇಲ್ಲದಿದ್ದರೆ ರೆಸಿಡೆನ್ಸಿಗೆ ಮುತ್ತಿಗೇ ಹಾಕುತೇವೆಂದು ನಿಸಾಮನ ಮುಖಾಂತರ ಹೇಳಿಸಬೇಕೆಂದು ಗೊತ್ತುಮಾಡಿಕೊಂಡಿದ್ದರು. ಸಾಹಸದಿಂದ ಈ ಗುಂಪನ್ನು ಚೆದುರಿಸಿದ್ದಾಯಿತು. ರಾಜಧಾನಿಯು ಸಮಾಧಾನವಾದ ಸ್ಥಿತಿಗೆಬಂತು. ಒಂದು ಗುಂಪಿನವರು ಸಾಯಂಕಾಲದ ಸಮಯದಲ್ಲಿ ರೆಸಿಡೆನ್ಸಿಗೆ ಮುತ್ತಿಗೇ ಹಾಕಿದರು; ಅಲ್ಲಿ ಎರಡು ಬಾಗಿಲ್ಗಳನ್ನು ಒಡೆದರು. ಹೆಚ್ಚಿನ ನಷ್ಟವನ್ನು ಇವರು ಮಾಡುವುದಕ್ಕೆ ಮುಂಚೆ ಈ ಗುಂಪಿನಮೇಲೆ ಬಂದೂಕುಗಳನ್ನು ಹಾರಿಸಲು ಅವರೆಲ್ಲಾ ಓಡಿಹೋದರು. ಈ ತುಂಟರಲ್ಲಿ ಮುಖಂಡರಾದವರನ್ನು ನಿಸ್ಸಾಮನು ಹಿಡಿಯಿಸಿ ಕೆಲವರನ್ನು ಗುಂಡಿನಿಂದ ಸುಡಿಸಿದನು, ಇನ್ನು ಕೆಲವರಿಗೆ ಸಜಾ ಆಯಿತು, ಗಲಾಟೆಯ ಕಷ್ಟವೆಲ್ಲಾ ಇಲ್ಲಿಗೆ ತೀರಲಿಲ್ಲ. ಭಯಪಡಬೇಕಾದ ಕಾಲ ಮುಂದೆ ಬರತಕ್ಕದ್ದಾಗಿತ್ತು ಮೊಹರಂ ಹಬ್ಬವು ಮುಸ

ಮುಖಂಡರನ್ನು ನಿಸಾಮನುತುಪಾಕಿಯಿಂದ ಹೊಡಿಸಿದ್ದು.

ಮೊಹರಂ

ಲ್ಮಾನರಿಗೆ ದೊಡ್ಡ ಹಬ್ಬವಷ್ಟೆ. ಆಕಾಲದಲ್ಲಿ ತುರುಕರೆಲ್ಲಾ ಸಾಧಾರಣವಾಗಿ ಮನಸ್ಸು ಬಂದಹಾಗೆ ವೀರಾವೇಶವನ್ನು ತಾಳತಕ್ಕ ವಾಡಿಕೆ ಉಂಟು. ಆ ಹಬ್ಬವು ಮುಂದೆ ಇದ್ದ ಸೆಪಟೆಂಬರು ತಿಂಗಳಲ್ಲಿ ಬರತಕ್ಕದ್ದಾಗಿತ್ತು. ಅದು ಜನರೆಲ್ಲಾ ತಲ್ಲಣಿಸುವಂಥಾ ಕಾಲವಾಗಿತ್ತು. ಆದರೆ ನಿಸಾಮನೂ ಮುಖ್ಯವಾಗಿ ಶಕ್ತನಾದ ಅವನ ಮಂತ್ರಿಯೂ ಸಹಾ ಆಕಾಲದಲ್ಲಿ ಯಾವ ಗಜಾಲಿಗೂ ಆಸ್ಪದವಿಲ್ಲದ ಹಾಗೆ ಏರ್ಪಾಡುಮಾಡಿಬಿಟ್ಟರು. ಹೈದರಾಬಾದಿನಲ್ಲಿ ಯಾವ ಪ್ರೋತ್ಸಾಹವೂ ಇಲ್ಲವೆಂದು ತಿಳಿದು ಉತ್ತರ ದೇಶದ ದಂಗೆ ಜನರು ನಿಸಾಮನ ಸೀಮೆಗೆ ಹೋಗಲೇ ಇಲ್ಲ.

ಇಲ್ಲಿ ದಂಗೆಯವರಿಗಾದ ನಿರಾಶೆ.

ಹೈದರಾಬಾದು ದೊಡ್ಡ ರಾಜ್ಯ, ಅಲ್ಲಿಗೆ ಹೋದರೆ ತಮಗೆ ಬೇಕಾದಷ್ಟು ಪ್ರೋತ್ಸಾಹದೊರೆಯಬಹುದೆಂದು ದಂಗೆಯುವರಿಗೆ ಕೋರಿಕೆಯಿತ್ತು. ಆದರೆ ಸಾಲಾರಜಂಗನ ಸಾಮರ್ಥ್ಯದಿಂದ ಔತ್ತರೇಯರಿಗೆ ಆಶಾಭಂಗವಾಯಿತು. ಕೊನೆಗೆ ದಂಗೆಯವರಿಗೆ ನಿಜವಾದ ಸಹಾಯ ಮಾಡದಿದ್ದಾಗ್ಯೂ ಹೈದರಾಬಾದು ಸರ್ಕಾರದವರು ದಂಗೆಯವರ ಕೈಯಲ್ಲಿ ಎಷ್ಟು ಹಾವಳಿ ಮಾಡುವುದಕ್ಕೆ ಆಗುವುದೋ ಅಷ್ಟರಮಟ್ಟಿಗೆ ಮಾಡಿಕೊಳ್ಳಿ ಎಂದು ಅವರ ಗೋಜಿಗೆ ಹೋಗದೆ ಇರುವ ಆಶೆಯೂ ಇಲ್ಲದಹಾಗಾಯಿತು. ಮತ್ತು ದಂಗೆಯವರಿಗೆ ವಿರೋಧವಾದ ಆಟೋಪವನ್ನು ತೋರುತಾ ನಿಸಾಮನ ಸರ್ಕಾರದವರು ಮಾಡಿದ ಕಾರ್ಯನಿರ್ವಾಹದಿಂದ ಬ್ರಿಟಿಷ್ ಜನರಿಗೆ ಮಹತ್ತರವಾದ ಉಪಕಾರವಾಯಿತು. ಆದರೆ ಬ್ರಿಟಿಷರಲ್ಲಿ ನಿಸಾಮನಿಗೂ ಸಾಹಸಿಯಾದ ಅವನ ಮಂತ್ರಿಗೂ ಇದ್ದ ವಿಶ್ವಾಸವನ್ನು ಪರೀಕ್ಷಿಸುವುದಕ್ಕೆ ಇನ್ನೊಂದು ಸಮಯ ದೊರೆಯಿತು. ಇಂ

ಥಾ ಒಂದು ಸಂದರ್ಭವಿಲ್ಲದಿದ್ದರೆ ಆ ಮಹಾದಂಗೆಯ ಕಾಲದಲ್ಲಿ ಯೆಲ್ಲಾ ಹೈದರಾಬಾದು ಸೀಮೆಯು ಸಮಾಧಾನಸ್ಥಿತಿಯಲ್ಲಿಯೇ ಇತ್ತೆಂದು ನಿಸ್ಸಂದೇಹವಾಗಿ ಹೇಳಬಹುದು.

ಷೋರಾಪುರದರಾಜ

ದಕ್ಷಿಣಮರಾಟೆದೇಶದಲ್ಲಿದ್ದ ಷೋರಾಪುರದ ರಾಜನು ೧೮೫೮ ನೇ ಈಸವಿ ಜನವರಿ ತಿಂಗಳಲ್ಲಿ ಬ್ರಿಟಿಷ್‌ನವರ ಮೇಲೆ ತಿರುಗಿಬಿದ್ದನು. ಈ ಜವಿರ್ಾದಾರನು ನಿಜಾಮನ ಸರ್ಕಾರಕ್ಕೆ ಅಧೀನನಾಗಿದ್ದನು. ದಂಗೆಯವರ ಕಡೆಗೆ ಈ ರಾಜನು ಕತ್ತಿ ಎತ್ತಿದ್ದನ್ನು ತಿಳಿದು, ಅವನ ಜವಿರ್ಾದಾರಿಯಜನ ಯಾರೂ ಆ ರಾಜನ ನೌಕರಿಗೆ ಸೇರಕೂಡದು, ಹಾಗೆ ಸೇರಿಕೊಂಡರೆ ಅಂಥವರಿಗೆ ಮರಣದಂಡನೆಯಾದೀತೆಂದು ಇಸ್ತಿಹಾರನ್ನು ಸಾಲಾರಜಂಗನು ಕೊಡಿಸಿದ್ದಲ್ಲದೆ, ಆ ಜವಿರ್ಾದಾರನು ಇಂಗ್ಲಿಷ್‌ಸೇನೆಯನ್ನು ಎದುರಿಸಿ ಸೋತು ಹೋಗಿ ಪ್ರಾಣವನ್ನು ಕಾಪಾಡಿಕೊಳ್ಳುವುದಕ್ಕಾಗಿ ಹೈದರಾಬಾದಿಗೆ ಓಡಿಬರಲು, ಅಲ್ಲಿ ಅವನನ್ನು ಹಿಡಿದು ರೆಸಿಡೆಂಟುಸಾಹೇಬನ ವಶಕ್ಕೆ ಒಪ್ಪಿಸಿದರು.

ದಂಗೆಗೆಮೂಲ

ಘೋರವಾದ ಮಹಾದಂಗೆ ಎಂದು ಹೆಸರಾಗಿರುವ ಈ ದೊಡ್ಡ ದಂಗೆ ಹುಟ್ಟಿ ಬೆಳೆದ ಆನುಪೂರ್ವಿಯನ್ನು ತಿಳಿಸದೇ ಇದ್ದರೆ ಸಾಲಾರಜಂಗನು ಬ್ರಿಟಿಷ್ ಸರ್ಕಾರದವರಿಗೆ ಮಾಡಿದ ಉಪಕಾರದ ಸ್ವಭಾವ ಗೊತ್ತಾಗುವುದಿಲ್ಲ. ತಂತಮ್ಮ ಮತಗಳಿಗೆ ವಿರೋಧವಾದ ನಡತೆ ನಡೆಯಬೇಕೆಂದು ಇಂಗ್ಲೀಷ್ ಸರದಾರರು ಅಪ್ಪಣೆ ಮಾಡುತಾರೆಂದು ಬ್ರಿಟಿಷ್ ದಂಡಿನಲ್ಲಿದ್ದ ಸಿಪಾಯಿಗಳ ಪಟಾಲಂಗೆಲ್ಲಾ ವಿಶೇಷವಾದ ಅಸಮಾಧಾನ ಉಂಟಾಗಿತ್ತು. ಲಾಡ್ ಡಾಲ್ ಹೂಸಿಯು ನಿಷ್ಕಾರಣವಾಗಿ ಅನೇಕ

ರಾಜವಾಡೆಗಳನ್ನು ಇಂಗ್ಲಿಷರ ಸೇನೆಗೆ ಸೇರಿಸಿಕೊಂಡ ಕಾರಣ ಅಂಥಾ ಸಂಸ್ಥಾನದ ಹಕ್ಕುದಾರರಿಗೆ ಹೆಚ್ಚಾಗಿ ದುಃಖ ಉಂಟಾಗಿತ್ತು. ವಿಸ್ತಾರವಾಗಿದ್ದ ಮರಾಟೆರಾಜ್ಯವನ್ನು ಹಿಡಿದುಕೊಂಡು ಕೊನೇಪೇಶ್ವೆಯಾದ ಬಾಜೀರಾಯನಿಗೆ ವರುಷಕ್ಕೆ ೮ ಲಕ್ಷ ರೂಪಾಯಿಯನ್ನು ಜೀವನಕ್ಕಾಗಿ ಇಂಗ್ಲಿಷ್ ಸರಕಾರದವರು ಕೊಡುತ್ತಾ ಇದ್ದದು ಸರಿಯಷ್ಟೆ; ಅದನ್ನು ಬಾಜೀರಾಯನ ಮೊಮ್ಮಗನಾದ ನಾನಾರಾಯನಿಗೆ ಕೊಡುವುದಿಲ್ಲವೆಂದು ನಿಲ್ಲಿಸಿಬಿಟ್ಟರು. ಮೊಗಲ್ ಚಕ್ರವರ್ತಿಯಾದ ಬಹಾದುರ್ ಷಹ ಸತ್ತಮೇಲೆ ದಿಳ್ಳಿಪಟ್ಟಣವನ್ನು ಇಂಗ್ಲೀಷರು ತಮ್ಮ ಸ್ವಾಧೀನಕ್ಕೆ ತೆಗೆದುಕೊಂಡುಬಿಟ್ಟರು. ಹೀಗೆ ಜಾತಿ ಕೆಡಿಸುವ ಅಪ್ಪಣೆಯೆಂಬುವುದರಿಂದ ಇಂಗ್ಲಿಷ್ ಸೇನೆಯ ಸಿಪಾಯಿಗಳೂ, ತಮ್ಮ ರಾಜ್ಯಗಳು ಹೋದವಲ್ಲಾ ಎಂದು ರಾಜವಾಡೆಯವರೂ, ತಮ್ಮ ರಾಜ್ಯವನ್ನೆಲ್ಲಾ ಕಿತ್ತುಕೊಂಡರು ಎಂಬ ಆಕ್ರೋಶದಿಂದ ನಾನಾರಾಯನೂ, ಅವನ ಕಡೆ ಮರಾಟೆಯವರೂ, ಅನೇಕ ಶತಮಾನಗಳಿಂದ ತುರುಕರ ವಶದಲ್ಲಿದ್ದ ದಿಳ್ಳಿಯನ್ನು ಇಂಗ್ಲಿಷರ ಹಿಡಿದುಕೊಂಡರೆಂಬ ಆಕ್ರೋಶದಿಂದ ಮುಸಲ್ಮಾನರೂ, ಇವರೆಲ್ಲರೂ ಒಟ್ಟಿಗೆ ಸೇರಿ ಇಂಗ್ಲಿಷರ ಅಧಿಕಾರವನ್ನು ಅಡಗಿಸಬೇಕೆಂದು ಸಮಯವನ್ನು ಹುಡುಕುತಿದ್ದರು. ಇದಕ್ಕೆ ಮುಂಚೆ ನಾನಾಸಾಹೇಬನು ಕಲ್ ಕತ್ತಾ ಸರ್ಕಾರದವರಿಗೆ ತನ್ನ ಹಕ್ಕನ್ನು ವಿವರಿಸಿ ಎಷ್ಟೋ ಲೇಖನಗಳನ್ನು ಬರೆದನು. ಅದನ್ನು ಅಲ್ಲಿ ಯಾರೂ ಲಕ್ಷ್ಯಮಾಡಲಿಲ್ಲ. ಆಗ ನಾನಾಸಾಹೇಬನ ಕಡೇ ವಕೀಲನಾಗಿ ಅವನ ಹಕ್ಕನ್ನು ಕುರಿತು ಮೇಲ್ಪಟ್ಟವರಿಗೆ ತಿಳಿಸಲು ಅಸೀಮುಲ್ಲಾ ಎಂಬ ಮನುಷ್ಯನನ್ನು ಇಂಗ್ಲೆಂಡ್ ದೇಶಕ್ಕೆ ನಾಸನು ಕಳುಹಿಸಿಕೊಟ್ಟನು. ಈ ವಕೀಲನ ಕಡೆಯಿಂದ ಏನೂ ಅನುಕೂಲಿಸಲಿಲ್ಲ. ನಾನಾಸಾಹೇಬನ ಬಳಿ

ಯಲ್ಲಿ ಮಂತ್ರಿತ್ವಕ್ಕೆ ಸೇರಿಕೊಂಡಿದ್ದ ತಾತ್ಯಟೋಪಿ ಎಂಬ ವಿಶೇಷ ಶಕ್ತನಾದ ಬ್ರಾಹ್ಮಣನು ತಮ್ಮ ಯಜಮಾನನಿಗೆ ಬೇಕಾದ ಸಲಹೆಗಳನ್ನು ಕೊಡುತಾ ಏರ್ಪಾಡುಗಳನ್ನು ಮಾಡುತಿದ್ದನು. ಹಿಂದುಸ್ಥಾನದ ಎಲ್ಲಾ ಕಡೆಗಳಲ್ಲಿಯೂ ಏಕಕಾಲದಲ್ಲಿ ದೊಂಬಿ ಎದ್ದು ಇಂಗ್ಲಿಷರನ್ನು ಎದುರಿಸಬೇಕೆಂದು ಗೊತ್ತುಮಾಡಿಕೊಂಡರು.

ದಂಗೆ ಬರಹಾರ್ಪುರದಲ್ಲಿ ಆರಂಭ.

ಮೊದಲು ಬರಹಾರ್ಪುರದಲ್ಲಿ ದಂಡಿನ ಸಿಪಾಯಿಗಳು ತಮ್ಮ ಹುದ್ದೇದಾರರ ಮೇಲೆ ತಿರುಗಿ ಬಿದ್ದರು. ತರುವಾಯ ಮೀರತ್ತು, ದಿಳ್ಳಿ, ಅಲಹಾಬಾದು, ಕಾರ್ನ್‌ಪೂರ್, ಆಗ್ರ, ಲಕ್ನೊ, ಗ್ವಾಲಿಯರ್, ಮೊದಲಾಗಿ ಅನೇಕ ಸ್ಥಳಗಳಲ್ಲಿದ್ದ ಇಂಗ್ಲಿಷ್ ಸೇನೆಯ ಸಿಪಾಯರು ದಂಗೆ ಎದ್ದರು. ಮಧ್ಯಕಾಲದಲ್ಲಿ ನಾನಾಸಾಹೇಬನೂ, ತಾತ್ಯನೂ, ದಿಳ್ಳೀಚಕ್ರವರ್ತಿಯ ವಂಶೀಯರೂ, ಸಹಾ ಸೇರಿಕೊಂಡರು. ಉಳಿದ ಸಂಸ್ಥಾನಿಕರಲ್ಲಿ ಕೆಲವರು ಒಳಗೂ ಕೆಲವರು ಹೊರಗೂ ಇಂಗ್ಲಿಷರಮೇಲೆ ಏರ್ಪಟ್ಟಿದ್ದರು. ಇತ್ತ ಬಂಗಾಳ, ಅತ್ತ ಪಂಜಾಬು, ಇವುಗಳು ಹೊರತು ಉಳಿದ ಹಿಂದೂಸ್ಥಾನವೆಲ್ಲಾ ದಂಗೆ ಎದ್ದುಬಿಟ್ಟು ಅನೇಕ ಇಂಗ್ಲಿಷರನ್ನೂ ಕೆಲವು ಹೆಂಗಸರು ಮಕ್ಕಳನ್ನೂ ಕೊಂದು ಹಾಕಿದರು. ವಿಶೇಷವಾಗಿ ಹಾಹಾಕಾರ ಹುಟ್ಟಿತು.

ನಾನಾರಾಯ.

ಇಂಗ್ಲಿಷರ ಅಧಿಕಾರವು ಹಿಂದುಸ್ಥಾನದಲ್ಲಿ ಉಳಿಯುವುದು ಕಷ್ಟವೆಂದು ತೋರುವಹಾಗಾಯಿತು. ನಾನಾಸಾಹೇಬನ ಕಡೆಯವರು ದೇಶದೇಶಗಳಿಗೂ ಹೋಗಿ ಜನರಿಗೆ ಬೋಧಿಸುತಾ ಬಂದರು.

ತಾತ್ಯಟೋಪಿ

ನಾನಾರಾಯನಕಡೆ ಇದ್ದ ತಾತ್ಯನು ವಿಶೇಷವಾಗಿ ಶಕ್ತ, ಸ್ವಾಮಿಭಕ್ತಿಯುಳ್ಳವನು,

ಎಂದು ಇಂಗ್ಲಿಷ್ ಜನರೇ ಒಪ್ಪಿಕೊಳ್ಳುತ್ತಾರೆ. ಇಂಗ್ಲಿಷರಿಂದ ಅಲ್ಲಲ್ಲಿ ಸೋಲಾದಾಗ್ಯೂ ಜಗ್ಗದೆ ಪುನಃಪುನಃ ಗರಿಗಟ್ಟಿಕೊಂಡು ಸೇನೆಯನ್ನೂ, ಅಲ್ಲಲ್ಲಿ ಲೂಟಮಾಡಿ ಹಣವನ್ನೂ, ಸಂಪಾದಿಸಿ, ಹೈದರಾಬಾದಿಗೆ ಉತ್ತರ ಸರಹದ್ದಿನಲ್ಲಿರುವ ಬ್ರಿಟಿಷ್ ರಾಜ್ಯದಲ್ಲಿ ಹಾವಳಿ ಮಾಡುತಾ, ಸಮಯದಲ್ಲಿ ತಕ್ಕಷ್ಟು ಸಹಾಯಮಾಡಿದರೆ ಪ್ರಯೋಜನ ಉಂಟೆಂದು ಹೈದರಾಬಾದಿನವರಿಗೆ ಎಷ್ಟೋ ಬಗೆಯಲ್ಲಿ ಹೇಳಿ ಕಳುಹಿಸಿದನು.

ಆದರೆ ನಿಸಾಮನಾಗಲಿ ಅವನ ಮಂತ್ರಿಯಾಗಲಿ ಇದಕ್ಕೆಲ್ಲಾ ಮನಸ್ಸು ಕೊಡಲಿಲ್ಲ. ಈಕಾಲದಲ್ಲಿ ಹೈದರಾಬಾದು ಸಂಸ್ಥಾನದವರು ಇಂಗ್ಲಿಷರಿಗೆ ಮಾಡಿದ ಉಪಕಾರವನ್ನು ಎಷ್ಟು ಶ್ಲಾಘನೆಮಾಡಿದರೂ ಸ್ವಲ್ಪವೇ ಇದೆ. ಆಗ ಹೈದರಾಬಾದಿನ ರೆಸಿಡೆಂಟಾದ ಕರ್ನಲ್ ಡೇವಿಡ್‌ಸನ್ ಎಂಬಾತನು ಸಾಲಾರಜಂಗನಿಂದ ಆದ ಸಹಾಯದ ವಿಷಯದಲ್ಲಿ ಸರ್ಕಾರಿಯಾಗಿ ಬರೆದಿರುವುದು ಏನೆಂದರೆ:—

ಸಾಲಾರಜಂಗನು ದಂಗೆಯವರಿಗೆ ವಿರೋಧಿ

ಮಂತ್ರಿಯ ವಿಷಯದಲ್ಲಿ ಆಗಿನ ರೆಸಿಡೆಂಟನು ಬರೆದದ್ದು.

"ನಿಸಾಮನ ಮಂತ್ರಿಯು ನಿಸ್ಸಂದೇಹವಾಗಿಯೂ ಕೇವಲ
"ಕ್ಷಿಪ್ರವಾಗಿಯೂ ಅನ್ಯಾದೃಶವಾದ ಶಕ್ತಿಯೊಡನೆಯೂ ಇಂ
"ಗ್ಲಿಷ್ ಸರ್ಕಾರಕ್ಕೆ ಮಾಡಿದ ಸಹಾಯವು ಶ್ಲಾಘನೆಮಾಡು
"ವ ಮಿತಿಯನ್ನು ಮೀರಿಹೋಗಿದೆ. ಈ ಮಂತ್ರಿಯು ತನಗೆ
"ಯಾವ ಕೇಡು ಸಂಭವಿಸಿದಾಗ್ಯೂ ನಮಗೆ ಒತ್ತಾಸೆಯನ್ನು
"ಕೊಡಲೇಬೇಕೆಂದು ಮಾಡಿಕೊಂಡಿದ್ದ ನಿಷ್ಕರ್ಷೆಯಿಂದ ಇ

"ವನಲ್ಲಿ ಜನರಿಗೆ ಅವಿಶ್ವಾಸವುಂಟಾಯಿತು. ಮುಸಲ್ಮಾನ
"ರೆಲ್ಲರೂ ಇವನನ್ನು ಜಾತಿಬಾಹಿರನೆಂದು ನಿಕೃಷ್ಟವಾಗಿ
"ಕಂಡರು. ಯಾರು ಎಷ್ಟೇ ಬೈಲಿ, ಭಯಪಡಿಸಲಿ, ಬೇ
"ಡಿಕೊಳ್ಳಲಿ, ಈತನು ಮೊದಲು ನಮಗೆ ನಂಬಿಕೆಯ
"ನ್ನು ತೋರಿಸಿ ಇಟ್ಟ ಹೆಜ್ಜೆಯನ್ನು ಸ್ವಲ್ಪವೂ ಚಲಿಸಲಿಲ್ಲ.
"ಜನರು ಇವನನ್ನು ಕೊಂದುಹಾಕಬೇಕೆಂದು ಹನ್ನೆರಡು
"ಸಾರಿ ಪ್ರಯತ್ನಮಾಡಿದರು. ಈ ಸಂಗತಿ ಈತನಿಗೆ ಮೊ
"ದಲೇ ತಿಳಿದಿತ್ತು. ಇಂಥಾ ಪ್ರಾಣಭೀತಿಯಾಗಲಿ, ಆಗಾಗ್ಯೆ
"ಇಂಗ್ಲಿಷರಿಗೆ ಎದುರು ಕಕ್ಷಿಯವರಿಂದ ಆದ ಅಪಜಯ
"ವಾಗಲಿ, ಈತನ ನಿಶ್ಚಲವಾದ ಚಿತ್ತವನ್ನು ಲೇಶವೂ ಅಳ್ಳಾ
"ಡಿಸುವುದಕ್ಕಾಗಲಿಲ್ಲ. ನಾನು ಸ್ವಲ್ಪವಾದ ಯಾವ ಸಹಾಯ
"ವನ್ನು ಕೇಳಲಿ, ಮಹತ್ತಾದ ಯಾವುದನ್ನು ಅಪೇಕ್ಷಿಸಲಿ,
"ಎಲ್ಲವನ್ನೂ ನಿಶ್ಚಲಚಿತ್ತನಾಗಿ ಕೊಡಿಸಿಕೊಟ್ಟನು. ನಿಸಾಂ
"ಸರ್ಕಾರದವರಿಗಿರುವ ಉಪಪತ್ತಿ ಎಲ್ಲಾ ತಮ್ಮದು ಎಂದು
"ತಿಳಿಯಿರಿ ಎಂದು ಹೇಳಿದ್ದಲ್ಲದೆ ಅದರಂತೆ ನಡಿಸಿಯೂ
"ನಡಿಸಿದನು."

ಆದರೆ ಪ್ರಯೋಜನವೇನು ? ಎಂಥಾ ಕಷ್ಟಕಾಲ, ಎಂಥಾ ಸಮಯ, ಆಗಮಾಡಿದ ಸಹಾಯ ಇನ್ನೆಂಥಾದ್ದು ! ಮದರಾಸು ಗವರ್ನರಾದ ಲಾಡ್ ಎಲ್ಫಿನ್ಸ್ಟನ್ನನು "ನಿಸಾಮನು ಹೋದರೆ ಎಲ್ಲಾ ಹೋಯಿತು" ಎಂದನು. ದಿಳ್ಳಿಯವರ ಮತ್ತು ನಾನಾರಾಯ ಮೊದಲಾದವರ ಕಡೆ ನಿಸಾಮ ಸೇರಿಕೊಂಡು ಅವರಿಗೆ ಬೇಕಾದ ಸಹಾಯವನ್ನು ಮಾಡದೆ ಇದ್ದಾಗ್ಯೂ, ನಿಸಾಮನೂ, ಶಕ್ತನಾದ ಅವನ ಮಂತ್ರಿಯೂ,

ಇಂಗ್ಲಿಷರಿಗಿದ್ದ ಅಪಾಯ.

ಯಾವ ತಂಟೆಗೂ ಹೋಗದೆ ಇತರ ಕೆಲವು ರಾಜವಾಡೆ ಜನರು ಮಾಡಿದಂತೆ ಸುಮ್ಮನೆ ತಟಸ್ಥರಾಗಿದ್ದ ಪಕ್ಷದಲ್ಲಿಯೂ ಕೂಡ ಈ ಭರತಖಂಡವೆಲ್ಲಾ ಹತ್ತಿಉರಿದು ಅಗ್ನಿಗೆ ಆಹುತಿಯಾಗುತಿತ್ತು. ಈ ಅಗ್ನಿಕುಂಡದಲ್ಲಿ ಇನ್ನು ಯಾರು ಆಹುತಿಯಾಗುತಿದ್ದರೋ, ಯಾವ ಅಧಿಕಾರಿಗಳ ಪಾಡು ಯಾವ ಸಂಸ್ಥಾನದ ಗತಿ ಎಂಥಾ ಪರಿಣಾಮಕ್ಕೆ ಬರುತಾ ಇತ್ತೋ, ಚರಿತ್ರರಚಕರು ತಿಳಿದು ಹೇಳಬೇಕು. ತನಗೆ ಇದ್ದದನ್ನೆಲ್ಲಾ ಕೊಡಲು ಸಿದ್ಧವಾಗಿದ್ದ ದೊರೆ, ತನ್ನ ಪ್ರಾಣದಮೇಲೆ ಕೂಡ ದೃಷ್ಟಿ ಇಡದೆ ಇಂಗ್ಲಿಷರ ಬೆಂಬಲಕ್ಕೆ ನಿಂತಿದ್ದ ಮಂತ್ರಿ, ಇಂಥಾ ಪುರುಷಶ್ರೇಷ್ಠರಿಬ್ಬರೂ ಮಾಡಿದ ಉಪಕಾರಕ್ಕೆ ಇಂಗ್ಲಿಷರಿಂದ ಆದ ಪ್ರತ್ಯುಪಕಾರವೇನು ? ಏನೆಂದು ವಿವರಿಸೋಣ ? ಸನ್ ೧೮೬೦ನೇ ಜುಲೈ ತಿಂಗಳಲ್ಲಿ ನಿಸಾಮನಿಗೆ ಸುಮಾರು ಒಂದು ಲಕ್ಷರೂಪಾಯಿ ಬಾಳುವ ಚಿಲ್ಲರೇ ಸಾಮಾನುಗಳನ್ನೂ, ಮಂತ್ರಿಗೆ ಸುಮಾರು ಮುವ್ವತ್ತು ಸಾವಿರ ರೂಪಾಯಿ ಬಾಳುವ ಚಿಲ್ಲರೇ ಸಾಮಾನುಗಳನ್ನೂ ಇಂಗ್ಲಿಷ್ ಸರ್ಕಾರದವರು ಇನಾಮಾಗಿಕಳುಹಿಸಿದರು. ನಮ್ಮ ಹಿಂದೂಸ್ಥಾನದವರ ಕಣ್ಣಿಗೆಇದೆಲ್ಲಾ ತಾಳಿಕೆಯಾಗಲಿಲ್ಲ. ಕಡೆಗೆ ಇಂಗ್ಲಿಷ್ ಸರ್ಕಾರದವರು ಹಿಂದೆ ನಿಸಾಮನಿಗೆ ಕೊಟ್ಟದ್ದು ಈಚೆಗೆ ವಾಪಸು ತೆಗೆದುಕೊಂಡಿದ್ದ ರಾಯಚೂರು ದಾರಾಶಿವ ಎಂಬ ಪ್ರಾಂತಗಳನ್ನು ಕೊಡುತೇವೆಂದು ಇಂಗ್ಲಿಷರು ಹೇಳಿದರು. ಸಹಾಯ ಸೇನೆಯ ವೆಚ್ಚಕ್ಕಾಗಿ ೧೮೫೩ರಲ್ಲಿ ಸೀಮೆಯ ಆಡಳತವನ್ನು ನಿಸಾಮನು ಒಪ್ಪಿಸಿದ್ದ ಸಂದರ್ಭವನ್ನು ಯೋಚಿಸಿದರೆ ಇಂಗ್ಲಿಷ್‌ಸರ್ಕಾರದವರು ನಿಸಾಮನ ವಿಷಯದಲ್ಲಿ ನ್ಯಾಯವಾಗಿ ನಡೆದುಕೊಂಡಂತೆ ಆಗುವುದಿಲ್ಲ. "ಇಷ್ಟು ಕೊಟ್ಟರೂ ನಾವೇನೂ

ನಿಸಾಮನಿಗೆ ಇಂಗ್ಲಿಷರು ಮಾಡಿದ ಅಲ್ಪವಾದ ಉಪಕಾರ.

ನಿಸಾಂ ಸರ್ಕಾರಕ್ಕೆ ಕೊಟ್ಟಂತೆ ಆಗುವುದಿಲ್ಲ'' ಎಂದು ರೆಸಿಡೆಂಟು ಸಾಹೇಬನೇ ಅಭಿಪ್ರಾಯಪಟ್ಟನು. ಈಪ್ರತ್ಯುಪಕಾರದ ವಿಚಾರ ವಾಗಿ ರೆಸಿಡೆಂಟಾದ ಕರ್ನಲ್ ಡೇವಿಡ್ ಸನ್ನನು ಅರಮನೆಯಲ್ಲಿ ತನ್ನ ಭೇಟಿಮಾಡಿಕೊಂಡು ಮುಖ್ಯವಾದ ಸಂಗತಿ ಕುರಿತು ಪ್ರಶ್ನೆಮಾಡಿದಾಗ, ಬ್ರಿಟಿಷ್ ಸರ್ಕಾರದವರು ಆಗ ಬಿಟ್ಟುಕೊಟ್ಟ ಸೀಮೆಗಳ ವಿಷಯ ದಲ್ಲಿ ನಿಸಾಮನು ಸಂತೋಷವನ್ನು ಸೂಚಿಸಿದ್ದಲ್ಲದೆ ಇನ್ನು ಎರಡು ಮಾತನ್ನು ಹೇಳಿದನು:

(೧) ಇಂಗ್ಲಿಷರು ತಮ್ಮ ಆಡಳತದಲ್ಲಿರಿಸಿಕೊಂಡಿದ್ದ ಸೀಮೆಗಳ ಆದಾಯದಲ್ಲಿ ಖರ್ಚುಹೋಗುತಾ ಉಳಿದದ್ದನ್ನು ನಿಸಾಂ ಸರ್ಕಾರಕ್ಕೆ ಪ್ರತಿವರ್ಷವೂ ಕೊಡಬೇಕು. ಆ ಹುಟ್ಟುವಳಿಯು ಖರ್ಚಿಗಿಂತಲೂ ಕಮ್ಮಿಯಾದರೆ, ಹಾಗೆ ಕಮ್ಮಿ ಯಾದ ಹಣಕ್ಕೆ ನಿಸಾಮನನ್ನು ಗುರಿಮಾಡಕೂಡದು.

(೨) ಮತ್ತು ನಿಸಾಮನಿಂದ ಇಂಗ್ಲಿಷರು ತಮ್ಮ ಆಳ್ವಿಕೆಗೆ ತೆಗೆದುಕೊಂಡಿರುವ ಸೀಮೆಗಳ ಆಡಳತವು ಹೈದರಾಬಾದು ರೆಸಿಡೆಂಟರಿಗೆ ಇರಬೇಕಲ್ಲದೆ ನಾಗಪುರದ ಚೇಫ್ ಕಮಿಷನರಿಗೆ ಇರಕೂಡದು.

ಈ ಎರಡು ಷರತ್ತಿಗೂ ಕಲ್ಕತ್ತಾ ಸರ್ಕಾರದವರು ಮೊದಲು ಸ್ವಲ್ಪ ಗೊಣಗಾಡಿ ತರುವಾಯ ಒಪ್ಪಿಕೊಂಡರು.

ಸಾಲಾರಜಂಗನ ಪ್ರಾಣಕ್ಕೆ ಅಪಾಯ.

ಈ ಮಾತು ಮುಗಿದ ತರುವಾಯ ರೆಸಿಡೆಂಟು ಸಾಹೇಬನೂ ವಜೀರನಾದ ಸಾಲಾರಜಂಗನೂ ೧೮೫೯ನೇ ಈಸವಿ ಮಾರ್ಚಿ ೧೫ನೇ ತಾರೀಖಿನಲ್ಲಿ

ಅರಮನೆಯಿಂದ ಈಚೆಗೆ ಬರುತಾ ಇರುವಾಗ ಮಂತ್ರಿಯಮೇಲೆ ಯಾರೋ ಒಂದು ತುಪಾಕಿಯನ್ನು ಹಾರಿಸಿದರು. ಅದರ ಗುಂಡು ಮಂತ್ರಿಗೆ ತಗಲದೆ ಗುರಿತಪ್ಪಿ ಅವನ ಹಿಂದೆ ಇದ್ದ ಇಬ್ಬರು ಚಾಕರರಿಗೆ ತಗಲಿತು. ಆ ತರುವಾಯ ಆ ತುಪಾಕಿಯನ್ನು ಹಾರಿಸಿದ ಮನುಷ್ಯನು ಕತ್ತಿಯನ್ನು ಹಿರಿದುಕೊಂಡು ಸಾಲಾರ ಜಂಗನ ಮೇಲೆ ನುಗ್ಗಿದನು. ಇವನು ಹತ್ತಿರಕ್ಕೆ ಬರುವುದಕ್ಕೆ ಮುಂಚೆ ಅಲ್ಲಿದ್ದವರು ಆ ಘಾತಕನನ್ನು ಬಲವಾಗಿ ಹಿಡಿದು ಕೊಂಡರು.

ಇಂಥಾ ಸಂದರ್ಭದಿಂದ ಮನಸ್ಸು ಸ್ವಲ್ಪವೂ ಚಲಿಸದೆ ಸಾಲಾರಜಂಗನು ರೆಸಿಡೆಂಟು ಸಾಹೇಬನ ಸಂಗಡಲೇ ಅದೇ ಆನೆಯ ಮೇಲೆ ಕೂತುಕೊಂಡು ರೆಸಿಡೆನ್ಸಿಗೆ ಹೋದನು. ನಿಜಾಮನ ಸ್ವಂತ ಅರಮನೇ ದಂಡಿನವರು ಅಂಗರಕ್ಷಣೆಗಾಗಿ ಹೋದರು.

—o—

# ೫ನೇ ಅಧ್ಯಾಯ.

## ದೊರೆಗೂ ಮಂತ್ರಿಗೂ ವಿರೋಧ.

ಹಿತ್ತಾಳೆ ಕಿವಿ, ಮಂತ್ರಿಮೇಲೆ ಪಿತೂರಿ.

ಇದುವರೆಗೆ ಸಾಲಾರಜಂಗನಿಗೆ ಮಂತ್ರಿಪದವಿ ಬಂದು ಎಂಟು ವರುಷಕ್ಕೆ ಸಮೀಪವಾಯಿತು. ಅಲ್ಲಿನ ತನಕ ಸಾಲಾರಜಂಗನು ರಾಜ್ಯಭಾರದ ಕಾರಕರ್ದಿನಲ್ಲಿಯೇ ಆಗಲಿ, ಹೊರವಿರ್ಪಾಡುಗಳನ್ನು ಮಾಡಿ ರಾಜ್ಯವನ್ನು ಸಮಾಧಾನದ ಸ್ಥಿತಿಗೆ ತರುವ ವಿಷಯದಲ್ಲಿಯೇ ಆಗಲಿ, ಯಾವುದನ್ನೂ ಕಮ್ಮಿ ಮಾಡಲಿಲ್ಲ. ಇವನ ಹೊಸ ವಿರ್ಪಾಡುಗಳು ಲೆಕ್ಕಮಾಡಿ ನೋಡುವರೆ ಎಷ್ಟೋ ಇವೆ; ಅವುಗಳ ಗುಣವನ್ನು ನೋಡುವರೆ ಅಪರಿಮಿತವಾಗಿದೆ. ಆದರೇನು? ಗುಣಗ್ರಹಣರಲ್ಲದವರಲ್ಲಿ ಯಾವ ಮಹತ್ತರವಾದ ರಾಜಕಾರ ಎಷ್ಟಾದರೇನು? ಇವನು ಮಾಡಿದ ಒಳ್ಳೇಕಾರ್ಯ ಯಾವುದೂ ಗಣನೆಗೆ ಬಾರದೇ ಹೋಯಿತು. ಅದರೊಳಗಿನ ಪಿತೂರಿ ಎಂಬ ಬಾಣಕ್ಕೆ ಇವನೇ ಲಕ್ಷ್ಯವಾಗಿದ್ದನು. ಇವನ ಸ್ಥಾನಕ್ಕೆ ಬರಬೇಕೆಂದು ಯತ್ನಮಾಡುತಿದ್ದ ಜನರು ಇವನ ಅಧಿಕಾರ ಹೋಗುವುದಕ್ಕೆ ಬೇಕಾದ ಜಾಲವನ್ನು ಬಿಡ್ಡಿದರು. ಮಂತ್ರಿಯು ರುಷವತ್ತಿಗೆ ಸಿಳವಟ್ಟಿದಾನೆಂಬದಾಗಿ ಕೇವಲ ಬುದ್ಧಿವಂತಿಗೆಯಿಂದ ಹೊಸೆದ ಕಥೆಗಳನ್ನು ನಿಸಾಮ ಕೇಳಲು ಇಚ್ಛೆಯುಳ್ಳವನಾಗಿದಾನೆಂದು ತೋರಿದಾಗೆಲ್ಲಾ ಸ್ವಲ್ಪವೂ ಬಿಡದೆ ಆತನ ಕಿವಿಗೆ ಕೂರಿ ಕೂರಿ ಅವನು ಎಲ್ಲವನ್ನೂ ನಂಬುವಂತೆ ಮಾಡಿದರು. ಕಿವಿ ಹಿತ್ತಾಳೆಯಾದರೆ ಮೈಯೆಲ್ಲಾ ಚಿನ್ನವಾದರೂ ಉಪಯೋಗವಿಲ್ಲ. ಹೇಳಿದವರ ನಾಲಿಗೆಯನ್ನು ಸೀಳಬೇಕು ಎಂದರೆ ಕೇಳಿದವರ ಕಿವಿಯನ್ನು

ಮೊದಲು ಕುಯ್ಯಬೇಕು ಎಂಬ ನಾಣ್ಣುಡಿ ಕೇವಲವಾಗಿ ಅನುಭವದಸಾರವೆನ್ನಬೇಕು. ಕೇಳತಕ್ಕವರು ಇದ್ದಷ್ಟೂ ಹೇಳತಕ್ಕವರು ಹೆಚ್ಚುವರು. ಇಂಥಾ ಪೊಳ್ಳುಮಾತುಗಳು ಹುಟ್ಟಿಸಿದ ಸಂದೇಹದಿಂದ ನಿಸಾಮನು ೧೮೬೧ನೇ ಈಸವಿ ಮೇ ೨೬ನೇ ತಾರೀಖಿನಲ್ಲಿ ರೆಸಿಡೆಂಟು ಡೇವಿಡ್ಸನ್ ಸಾಹೇಬನನ್ನು ಕರೆಯಿಸಿ ಮಂತ್ರಿಯನ್ನು ಬರತರಫು ಮಾಡಬೇಕೆಂದು ಇದೇನೆ ಎಂಬದಾಗಿ ಹೇಳಿದನು. ಹಾಗೆ ಮಾಡತಕ್ಕದ್ದಲ್ಲವೆಂದು ರೆಸಿಡೆಂಟು ಸಾಹೇಬನು ಎಷ್ಟು ಹೇಳಿದರೂ ನಿಸಾನು ಕೇಳಲಿಲ್ಲ. ಇಷ್ಟು ದಿವಸವೂ ಸಾಲಾರಜಂಗನು ಪಟ್ಟ ಕಷ್ಟವೆಲ್ಲಾ ಅರೆಗಳಿಗೆಯಲ್ಲಿ ನಿಷ್ಫಲವಾಗುವ ಸಮಯ ಬಂತು.

ಆದರೆ ನಿಶ್ಚಯ ಕೆಡಿಸುವುದಿಲ್ಲ, ಸುಳ್ಳು ಬದುಕಿಸುವುದಿಲ್ಲ.

ಫಿತೂರಿ ಹೊರಕ್ಕೆಬಿದ್ದದು.

ಷಂಷುಲ್ ಉಂರ ಎಂಬ ಪ್ರಮುಖನಾದ ಸಭಿಕಕನು ಸಾಲಾರಜಂಗನ ಮಹತ್ತರವಾದ ಸದ್ಗುಣಗಳನ್ನೂ ಶಕ್ತಿಯನ್ನೂ ಬಲ್ಲವನಾಗಿದ್ದನು. ಮೇಲೆ ಕಂಡ ಮೇ ತಿಂಗಳು ೨೮ನೇ ತಾರೀಖಿನಲ್ಲಿ ಈ ಫಿತೂರಿ ಸಂಗತಿಯನ್ನೆಲ್ಲಾ ಭೇದಿಸಿ ತಿಳಿದುಕೊಂಡು ಅದನ್ನೆಲ್ಲಾ ಹೊರಕ್ಕೆ ಹಾಕಿ ಗುಟ್ಟನ್ನು ಬಿಚ್ಚಿ ನಿಸಾಮುನಿಗೆ ಎಲ್ಲವನ್ನೂ ಒಡೆದು ಹೇಳಿದ್ದೂ ಅಲ್ಲದೆ ಸಾಲಾರಜಂಗನು ಕೆಲಸವನ್ನು ಬಿಡಕೂಡದು, ಎಂದು ಆ ಮಂತ್ರಿಗೆ ನಿಸಾಮುನಿಂದ ಕಾಗದವನ್ನು ಬರೆಯಿಸಿದನು. ಷಂಷುಲ್ ಉಂರನು ಮಾಡಿದ ರಾಜಕಾರ್ಯಕ್ಕೆ ಸಹಾಯವಾಗಿ ಇನ್ನೊಂದು ವಿಶೇಷವಾದ ಸಂಗತಿ ಜರಗಿತು.

ಜನಾನಿಯುವರು ಮಂತ್ರಿಯನ್ನು ವಹಿಸಿದ್ದು.

ಸಾಲಾರಜಂಗನನ್ನು ವಸೀರ್ ಕೆಲಸದಿಂದ ತೆಗೆಯುತಾರೆಂಬ ವರ್ತಮಾನವು ನಿಸಾಮನ ಜನಾನಿ ಜನಕ್ಕೆ ಮುಟ್ಟಿತು. ಆಗ ಜನಾನಿಯುವರೆಲ್ಲರೂ ಒಟ್ಟಿಗೆ ಸೇರಿ ಪಶ್ಚಾತ್ತಾಪಪಟ್ಟು ಸಾಲಾರಜಂಗನು ಬಹಳ ಶಕ್ತ, ಈತನನ್ನು ಮಂತ್ರಿತ್ವದಿಂದ ತೆಗೆಯಕೂಡದು, ಹಾಗೆ ಈತನಿಗೆ ವಸೀರ ಕೆಲಸವನ್ನು ತಪ್ಪಿಸಿ ಬೇರೆ ಜನರನ್ನು ನೇಮಿಸಿದರೆ ನಾವುಗಳೆಲ್ಲರೂ ಗೋಷಾಬಿಟ್ಟು ಈಚೆಗೆ ಬಂದು ಅಂಥಾ ಹೊಸಮಂತ್ರಿಯಪಲ್ಲಕ್ಕಿಯನ್ನು ಮುರಿದು ಅವನ ಕಡೆಯವರನ್ನುಕಲ್ಲಿನಲ್ಲಿ ಹೊಡೆದುಬಿಡುತೇವೆ, ಹೀಗೆಂದು ನಿಸಾಮನಿಗೆ ಬರೆದು ಕಳುಹಿಸಿದರು. ಈಪ್ರಕಾರ ರಾಣಿವಾಸದವರು ಕೂಡ ಮಂತ್ರಿಯಪರದಲ್ಲಿ ಇಷ್ಟು ವಹಿಸಿಕೊಂಡಿದ್ದದು ನಿಸಾಮನ ಮನಸ್ಸು ತಿರುಗುವುದಕ್ಕೆ ಕಾರಣವಾಯಿತೆಂದು ವದಂತಿ ಇದೆ. ಕಾರಣ ಯಾವುದಾದರೂ ಆಗಲಿ ತನಗಿದ್ದ ಕೆಟ್ಟ ಅಭಿಪ್ರಾಯ ಹೋಯಿತೆಂದು ತೋರ್ಪಡಿಸುವುದಕ್ಕಾಗಿ ನಿಸಾಮನು ಒಂದು ಹಬ್ಬದ ದಿವಸ ಸುಮಾರು ಐವತ್ತು ಸಾವಿರ ರೂಪಾಯಿ ಬಾಳುವ ಜವಾಹಿರುಗಳನ್ನು ಸಾಲಾರಜಂಗನಿಗೆ ಇನಾಮಾಗಿ ಕಳುಹಿಸಿಕೊಟ್ಟನು; ಆ ಮಾರನೇ ವರುಷದ ಡಿಸೆಂಬರು ತಿಂಗಳಲ್ಲಿ ಮಂತ್ರಿಗೆ ದೇಹಾಲಸ್ಯವಾಗಿ ಗುಣವಾಗುವ ಕಾಲದಲ್ಲಿ ದೇವರ ಕಟಾಕ್ಷದಿಂದ ಅವನಿಗೆ ಆರೋಗ್ಯವಾಯಿತಲ್ಲಾ ಎಂಬ ಸಂತೋಷದಿಂದ ದೊರೆಯು ಬಡಬಗ್ಗರಿಗೆ ಅನ್ನವನ್ನು ಹಾಕಿಸಿ ಬಟ್ಟೆಯನ್ನೂ ವಿಶೇಷವಾಗಿ ಹಣವನ್ನೂ ಧರ್ಮಾರ್ಥವಾಗಿ ಕೊಡಿಸಿದನು.

ಹೀಗೆ ದೊರೆಗೂ ಮಂತ್ರಿಗೂ ಪೂರ್ವದಂತೆ ಮೈತ್ರಿಯುಂಟಾಗಲು ಸಾಲಾರಜಂಗನ ಕೈಬಲವಾಗುವಂತೆ ಇನ್ನೊಂದು ಸಂಗತಿ

ಜಗಿಗಿತು. ಸಾಲಾರಜಂಗನನ್ನು ಮಂತ್ರಿತ್ವದಿಂದ ತೆಗೆಯಕೂಡ ದೆಂದು ಕಲ್‌ಕತ್ತಾ ಸರ್ಕಾರದವರು ನಿಸಾಮನಿಗೆ ಕರೀತಾ ಬರೆದದ್ದೂ ಅಲ್ಲದೆ, ೧೮೭೬ರಲ್ಲಿ ಸಾಲಾರಜಂಗನಿಗೆ ಕೆ. ಸಿ. ಎಸ್.ಐ. ಎಂಬ ಬಿರುದನ್ನೂ ೧೮೭೧ರಲ್ಲಿ ನಿಸಾಮನಿಗೆ ಜಿ. ಸಿ. ಎಸ್. ಐ., ಎಂಬ ಅದಕ್ಕಿಂತಲೂ ಹೆಚ್ಚಿನ ಮರ್ತಬೆ ಬಿರುದನ್ನೂ ವಿಕ್ಟೋರಿಯ ರಾಣಿಯ ಸರ್ಕಾರದವರು ಕೊಡಿಸಿದರು. ಇಷ್ಟಾದರೂ ೧೮೭೭ರಲ್ಲಿ ನಿಸಾಮನಿಗೂ ಮಂತ್ರಿಗೂ ಪುನಃ ವೈಮನಸ್ಸ್ಯ ಹುಟ್ಟಿತು.

ಮಂತ್ರಿ ನಿಯೋಗಿಯಾದ್ದು.

ಇಂಗ್ಲಿಷರ ಸೀಮೆಯಲ್ಲಿ ಅಪರಾಧಮಾಡಿ ಹೈದರಾಬಾದಿಗೂ, ಹೈದರಾಬಾದಿನ ಸೀಮೆಯಲ್ಲಿ ಅಪರಾಧಮಾಡಿ ಇಂಗ್ಲಿಷರ ಸೀಮೆಗೂ ಓಡಿಬರುವ ಜನರನ್ನು ಪರಸ್ಪರ ಬಿಟ್ಟುಕೊಡುವ ವಿಚಾರದಲ್ಲಿ ಒಂದು ಕರಾರಾಗಬೇಕೆಂದು ಇಂಗ್ಲಿಷ್ ಸರ್ಕಾರದವರು ಸಲಹ ಮಾಡಿದರು. ನಿಸಾಮನು ಇದರಿಂದ ತನ್ನ ಅಧಿಕಾರಕ್ಕೂ, ಗೌರವಕ್ಕೂ ಹಾನಿಯುಂಟಾಗುವುದೆಂದು ತಿಳಿದು ಆ ಕರಾರಿಗೆ ಒಪ್ಪದೇ ಹೋದ್ದೂ ಅಲ್ಲದೆ, ಇಂಥಾ ಸಲಹೆಯು ತನ್ನ ಮಂತ್ರಿಯ ಒಳತಂತ್ರದಿಂದ ನಡೆದಿರಬೇಕೆಂದು ಯೋಚಿಸಿ ತನ್ನ ಅಸಮಾಧಾನವನ್ನು ಬಹಿರಂಗವಾಗಿ ತೋರಿಸಲು ಹೊರಟನು. ಮಂತ್ರಿಗೂ ನಿಸಾಮನಿಗೂ ನಂಬಿಕೆಯುಳ್ಳ ಮಧ್ಯಸ್ಥಗಾರರಾಗಿ ಓಡಿಯಾಡುತ್ತಿದ್ದ ಇಬ್ಬರಲ್ಲಿ ಒಬ್ಬನು ಈ ಸಮಯದಲ್ಲಿಯೇ ತೀರಿಹೋಗಲು, ಮಂತ್ರಿಗೆ ವೀರಶತ್ರುವಾಗಿದ್ದ ಲಸ್ಕರ್ ಜಂಗನೆಂಬ ಒಬ್ಬ ಮನುಷ್ಯನನ್ನು ನಿಸಾಮನು ಸತ್ತುಹೋದ ಮಧ್ಯಸ್ಥಗಾರನ ಕೆಲಸಕ್ಕೆ ನೇಮಕನಾಡಿದನು. ಕೂಡಲೆ ಸಾಲಾರಜಂಗನು ತನ್ನ ಕೆಲಸಕ್ಕೆ

ರಾಜೀನಾಮೆಯನ್ನು ಕಳುಹಿಸಿಕೊಟ್ಟನು. ನಿಸಾಮನು ಈ ರಾಜೀನಾಮೆಯನ್ನು ಅಂಗೀಕರಿಸಲೂ ಇಲ್ಲ, ಅಂಗೀಕಾರ ಮಾಡುವುದಿಲ್ಲವೆಂದು ಹೇಳಲೂ ಇಲ್ಲ. ಆ ಕಾಗದವನ್ನು ಸುಮ್ಮನೆ ತನ್ನ ಬಳಿಯಲ್ಲಿರಿಸಿಕೊಂಡು ಬಿಟ್ಟನು.

ಮಂತ್ರಿಯ ರಾಜೀನಾಮೆ.

ಆಗ ರೆಸಿಡೆಂಟಾಗಿದ್ದ ಸರ್‌ಜಾರ್ಜ್‌ಯೂಲ್ ಎಂಬ ಸಾಹೇಬನಿಗೆ ಈ ಸಂಗತಿ ತಿಳಿಯಿತು. ತರುವಾಯ ಈ ರೆಸಿಡೆಂಟುಸಾಹೇಬನು ಎರಡು ಮೂರು ಸಾರಿ ನಿಸಾಮನ ಭೇಟಿಮಾಡಿಕೊಂಡು ಸಾಲಾರಜಂಗನ ಸಂಗತಿ ಕುರಿತು ಕೇಳಲಾಗಿ, ಸಾಲಾರಜಂಗನು ಬಹು ಅಹಂಕಾರಿ, ಅನೇಕವೇಳೆ ತನ್ನ ಕೆಲಸಕ್ಕೆ ರಾಜೀನಾಮೆಯನ್ನು ಕೊಡುತೇನೆಂದು ಭಯಪಡಿಸಿದನು; ಇದು ನಿಸಾಮನಿಗೆ ಸಹಿಸಲಿಲ್ಲ; ಮಂತ್ರಿಯೂ ಇತರ ನೌಕರರ ಹಾಗೆಯೇ ವಿಧೇಯನಾಗಿರಬೇಕು; ಹಾಗಲ್ಲವಾದರೆ ಮಂತ್ರಿಯ ಆಟೋಪ ತನ್ನ ಮರ್ಯಾದೆಗೆ ಕಡಮೆ; ಈ ವಿಚಾರವಾದ ಆಗ್ರಹವು ನಿಸಾಮನಿಗೆ ಇದೆ ಎಂದು ತಿಳಿಯಬಂತು. ಆಗ ಯೂಲ್‌ಸಾಹೇಬನ ಬಲವಂತದಿಂದ ನಿಸಾಮನ ಕ್ಷಮಾಪಣೆಯನ್ನು ಕೇಳಿಕೊಂಡು ಉತ್ತರೋತ್ತರವೂ ತಾನು ಯಾವ ಕೆಟ್ಟ ಚಿಂತೆಯನ್ನೂ ಮಾಡತಕ್ಕವನಲ್ಲವೆಂದು ಸಾಲಾರಜಂಗು ಹೇಳಿದಮೇಲೆ ಆತನೇ ಮಂತ್ರಿಯಾಗಿರಬೇಕೆಂದು ನಿಸಾಮ ಅಪ್ಪಣೇಮಾಡಿದನು.

ರೆಸಿಡೆಂಟು ಸಮಾಧಾನ ಮಾಡಿದ್ದು.

ಸಾಲಾರಜಂಗನ ಸ್ವಭಾವವು ಇಂಥಾ ಅಹಂಕಾರವನ್ನು ತೋರಿಸತಕ್ಕದ್ದಾಗಿರಲಿಲ್ಲ. ಚಾಡೀ ಹೇಳತಕ್ಕವರ ಸುಳ್ಳು ಮಾತುಗಳಿಂದ ಹುಟ್ಟುವ ವಿರೋಧವಾದ ಆಟೋಪವು ಯೋಗನಿಷ್ಟರಾದ ಮಹಾಮುನಿಗಳ ಮೌನವನ್ನಾದರೂ ಕೆಡಿಸುವುದು. ತಥಾಪಿ

ಶ್ರಮಪಟ್ಟು ಯಜಮಾನನಿಗೋಸ್ಕರ ಪ್ರಾಣವನ್ನಾದರೂ ಕೊಡಲು ಸಿದ್ಧವಾಗಿರುವ ಪುರುಷರ ನಡತೆಯಲ್ಲಿ ಇಲ್ಲದ ದೋಷವನ್ನು ಹುಡುಕಿದರೆ, ಕೋಪಬರತಕ್ಕದ್ದೇ ಉದಾತ್ತಸ್ವಭಾವ. ಇಂಥಾ ಪುರುಷ ಶ್ರೇಷ್ಠರು ಮಂತ್ರಿಯಾಗಿದ್ದರೇ ದೇಶಕ್ಕೆ ಪ್ರಯೋಜನ, ಪ್ರಜಾ ಪರಿಪಾಲನೆ, ರಾಜನ ಗೌರವ, ಸಹಾ ಉಂಟಾಗತಕ್ಕದ್ದು. ಶ್ವಾನ ಮುಖಿಗಳು ಭೃತ್ಯರಾದರೆ ಯಜಮಾನನ ರಕ್ತವನ್ನು ಹೀರುವರು. ಆದರೆ ದೂರದ ಯೋಚನೆಯು ರಾಜಸದಿಂದ ಮರೆಯಾಗುವುದು. ಗಳಿಗೆಗೆ ಒಳ್ಳೆಯವನು ಗಳಿಗೆಗೆ ಕೆಟ್ಟವನು ಎಂಬ ಕ್ಷಣಿತಸ್ವಭಾವ ತಾನೇ ಮಾನವಾದ್ದೇ! ಈ ವಿಧವಾಗಿ ದೊರೆಗೂ ಮಂತ್ರಿಗೂ ಸಮಾಧಾನವಾದ ಕೆಲವು ತಿಂಗಳಲ್ಲಿ ಇನ್ನೊಂದು ಹೆಚ್ಚು ಕಟ್ಟಲೆ ನಡೆಯಿತು. ಸನ್ ೧೮೬೮ನೇ ಈಸವಿ ಜನವರಿ ತಿಂಗಳಲ್ಲಿ ವಜೀರನು ಹಬ್ಬದ ದರಬಾರಿಗಾಗಿ ಅರಮನೆಗೆ ಹೋಗುತ ಇರುವಾಗ ಒಬ್ಬ ನೀಚನು ಅವನನ್ನು ಕೊಲ್ಲಬೇಕೆಂದು ಯತ್ನಮಾಡಿದನು. ದೈವಕೃಪೆಯಿಂದ ಅದು ನಡೆಯಲಿಲ್ಲ. ಕೆಟ್ಟವರನ್ನು ಕೆಲಸದಿಂದ ತೆಗೆದು ದರಬಾರಿನ ಆಡಳತವನ್ನು ಕ್ರಮಪಡಿಸಲು ಸಾಲಾರಜಂಗನು

ಪುನಃ ಮಂತ್ರಿಗೆಪ್ರಾಣಾಪಾಯ.

ಮಾಡಿದ ಏರ್ಪಾಡಿನಲ್ಲಿ ಈ ಘಾತಕನು ಬೆಸೆತಿಂದು ಈ ದುಷ್ಕಾರ್ಯಕ್ಕೆ ಉದ್ಯುಕ್ತನಾಗಿದ್ದನು. ಆ ದಿವಸ ಮಂತ್ರಿಯು ಅರಮನೆಗೆ ಬಂದಮೇಲೆ ದೊರೆಯು ಅವನನ್ನು ನೋಡಿ ಪಶ್ಚಾತ್ತಾಪ ಪಟ್ಟನು.

———

## ೬ನೇ ಅಧ್ಯಾಯ.

### ನಿಸಾಂಮಹಾಬೂಬಲ್ಲಿಯ ಬಾಲ್ಯ.

ನಿಸಾಮನಾದ ಅಫಸಲ್‌ವುದ್ದೌಲನು ಮೊದಲಿನಿಂದಲೂ ಚಾಡಿಕೋರರ ಮಾತಕೇಳಿ ವಸೀರನ ಸಂಗಡ ವೈರವನ್ನೇ ಬೆಳೆಯಿಸುತಾ ಒಂದೊಂದು ವೇಳೆ ಅವನಿಗೆ ತನ್ನ ಒಳ್ಳೇತನವನ್ನು ತೋರಿಸುತಾ ಇದ್ದು ಕಟ್ಟಕಡೆಗೆ ಸಂ ೧೮೬೯ನೇ ಈಸವಿ ಫೆಬ್ರುವರಿ ೨೬ನೇ ತಾರೀಖಿನಲ್ಲಿ ಕಾಲವಾದನು. ತರುವಾಯ ಮಾರ್ಚಿ ೧ನೇ ತಾರೀಖಿನಲ್ಲಿ ಅಫಸಲ್ ಉದ್ದೌಲನ ಮಗ ಮಹಾಬೂಬಲ್ಲಿಗೆ ಪಟ್ಟವಾಯಿತು.

ಮಹಬೂಬಲ್ಲಿಗೆ ಪಟ್ಟವಾದ್ದು.

ಈತನು ಇನ್ನೂ ಮೂರು ವರುಷದ ಬಾಲಕನಾದ್ದರಿಂದ ಕಾರ್‍ಯನಿರ್ವಾಹಕನಾಗಿ ಸಾಲಾರಜಂಗನನ್ನೂ ಇವನ ಜೊತೆಗೆ ಷಂಷುಲ್‌ಉಂರನನ್ನೂ ನೇಮಕಮಾಡಿದರು. ಷಂಷುಲ್‌ಉಂರನ ಮನೆತನಕ್ಕೆ ಸೇರಿದ ಅಮೀರಿಕಬೀರನು ಮೊದಲಿನಿಂದಲೂ ಸಾಲಾರಜಂಗನ ಯೋಗ್ಯತೆಯನ್ನು ತಿಳಿದವನಾದ್ದರಿಂದ ಅವನು ಮಾಡುತಾ ಇದ್ದ ರಾಜಕಾರ್‍ಯಗಳೆಲ್ಲವನ್ನೂ ಅನುಮೋದಿಸುತಾ ಬಂದನು. ಹೀಗಾದ್ದರಿಂದ ರಾಜ್ಯಭಾರದ ಆಡಳತಗಳನ್ನು ಕ್ರಮಪಡಿಸುವುದರಲ್ಲಿ ಸಾಲಾರಜಂಗನಿಗೆ ಅಡ್ಡಿಯಾವುದೂ ಉಂಟಾಗಲಿಲ್ಲ. ಆದರೆ ಒಂದಾನೊಂದು ಸಮಯದಲ್ಲಿ ಅಮೃತವು ವಿಷವಾಗುವುದುಂಟು. ಅನುಕೂಲವಾಗಿ ತೋರುವ ಸಂದರ್ಭವೇ ಪ್ರತಿಕೂಲವಾಗುವುದುಂಟು.

ರೆಸಿಡೆಂಟನಿಗೂ ಮಂತ್ರಿಗೂ ಹುಟ್ಟಿದ ಅಸಮಾಧಾನ.

ಇದುವರೆಗೂ ಬ್ರಿಟಿಷ್ ಸರ್ಕಾರದವರಿಗೆ ಸಾಲಾರಜಂಗನ ಮೇಲೆ ಇದ್ದ ಅಭಿಮಾನವು ಈಗ ಅಸಮಾಧಾನಕ್ಕೆ ತಿರುಗಲು ಸಮಯ ಬಂತು. ತಮ್ಮ ಚಿಕ್ಕಪ್ಪನಾದ ಸಿರಾಜುಲ್‌ಮುಲ್ಕನ ಮಂತ್ರಿತ್ವದಲ್ಲಿ ನಿಸಾಮನ ಕೈತಪ್ಪಿ ಬೀರಾರ್‌ಸೀಮೆಯು ಇಂಗ್ಲಿಷರ ವಶವಾಯಿತಲ್ಲಾ, ಅದನ್ನು ಹೇಗಾದರೂ ನಿಸಾಂ ಸರ್ಕಾರಕ್ಕೆ ಬರಮಾಡಿಕೊಳ್ಳಬೇಕೆಂದು ಸಾಲಾರಜಂಗನು ಯೋಚನೆ ಮಾಡುತಲೇ ಇದ್ದನು. ಬ್ರಿಟಿಷ್‌ಸರ್ಕಾರದವರು ಕೇವಲ ನ್ಯಾಯಪಕ್ಷಪಾತಿಗಳೆಂದು ಖ್ಯಾತಿ ಇದ್ದ ಕಾರಣ, ಬಂದಲ್ಲದಿದ್ದರೆ ಬಂದು ಸಾರಿಯಾದರೂ ಸರಿಯಾದ ಕಾರಣವನ್ನು ತೋರಿಸಿದಲ್ಲಿ ಬೀರಾರುದೇಶವನ್ನು ತಮಗೆ ಹಿಂತಿರುಗಿ ಕೊಡಬಹುದೆಂದು ಯೋಚಿಸಿದ್ದನು. ಹಾಗೆ ನಡೆಯಲಿಲ್ಲವಾದ್ದರಿಂದ ಉಪಾಯಾಂತರವನ್ನು ಹುಡುಕಬೇಕಾಯಿತು.

ನಿಸಾಮನಿಗೆ ಮೈಸೂರು ದೇಶದ ಮೇಲೆ ಇರುವ ಹಕ್ಕು.

ಶ್ರೀರಂಗಪಟ್ಟಣವನ್ನು ಗೆಲ್ಲುವುದಕ್ಕಾಗಿ ಇಂಗ್ಲಿಷರ ಸಹಾಯಕ್ಕೆ ನಿಸಾಮನ ಸೇನೆಯೂ ಮರಾಟೆಯವರ ಸೇನೆಯೂ ಹೋಗಿದ್ದವಷ್ಟೆ. ಗೆದ್ದ ರಾಜ್ಯದಲ್ಲಿ ನಿಸಾಮನಿಗೂ ಪೂನೇದವರಿಗೂ ಭಾಗ ಕೊಡಬೇಕೆಂದು ಕರಾರು ನಡೆದಿತ್ತು. ಆದರೆ ಟೀಪುಸುಲ್ತಾನನ ರಾಜ್ಯವೆಲ್ಲಾ ಸ್ವಾಧೀನವಾದ ಮೇಲೆ ಮೈಸೂರು ದೊರೆಗಳ ವಂಶೀಯರಿಗೆ ಈಗಿನ ಮೈಸೂರು ಸೀಮೆಯನ್ನು ಕೊಟ್ಟು ಆ ಪುರಾತನ ರಾಜ್ಯವನ್ನು ನಿಲ್ಲಿಸಬೇಕಾಗಿ ಬಂತು. ಇದು ಮಧ್ಯಕವಾಗಿ ತೆಗೆದುಕೊಟ್ಟ ರಾಜ್ಯವಾಗಿದೆ. ಈ ಏರ್ಪಾಡು ಇಲ್ಲದಿದ್ದರೆ ಈಗಿನ ಮೈಸೂರು ದೇಶವು ಮೂರು ಪಾಲಾಗಿ ಹೈದರಾಬಾದಿನವ

ರಿಗೆ ಒಂದು ಪಾಲು ಬರಬೇಕಾಗಿತ್ತು. ಅದು ಹುದುವಿನಲ್ಲಿಯೇ ನಿಂ
ತಿತ್ತು. ಆದರೆ ಆ ಸೀಮೆಯನ್ನು ೧೮೩೧ರಲ್ಲಿ ಇಂಗ್ಲಿಷರು ತಮ್ಮ
ಆಡಳತದಲ್ಲಿ ಇರಿಸಿಕೊಂಡು ಮೈಸೂರ ದೊರೆಯಾದ ಕೃಷ್ಣರಾಜ
ಒಡೆಯರಿಗೂ ಕೊಡದೆ, ಆ ಸೀಮೆಯ ತ್ರಿಪ್ವೇಕಕ್ಕೆ ಬಾಧ್ಯರಾದ
ನಿಸಾಮನಿಗೂ ಏನೂ ಕೊಡದೆ, ಆ ರಾಜ್ಯವನ್ನು ಮೋದಂಡವಾಗಿ
ಇರಿಸಿಕೊಂಡಿದ್ದರು. ಮೈಸೂರು ಕೃಷ್ಣರಾಜಒಡೆಯರು ತಮಗೆ
ಮಕ್ಕಳಿಲ್ಲದ್ದರಿಂದ ದತ್ತು ತೆಗೆದುಕೊಂಡು ಆ ದತ್ತುವನ್ನು ಅಂಗೀ
ಕಾರಮಾಡಿ ತಮ್ಮ ರಾಜ್ಯದ ಆಡಳತವನ್ನು ತಮಗೆ ಹಿಂದಕ್ಕೆ ಕೊ
ಡಬೇಕೆಂದು ಚರ್ಚೆಯನ್ನು ನಡಿಸುತಿದ್ದರು. ಈ ದತ್ತುವನ್ನು ಅಂ
ಗೀಕರಿಸದಿದ್ದರೆ ಮುಂದಕ್ಕೆ ಮೈಸೂರು ರಾಜ್ಯವನ್ನು ಏನು ಮಾಡಬೇ
ಕೆಂಬ ಚರ್ಚೆಯು ಬಲವಾಗಿ ಜರಗುತಿತ್ತು. ಅದುವರೆಗೆ ಮೈಸೂರ
ಕೃಷ್ಣರಾಜಒಡೆಯರಿಗೆ ೭೦ ವರುಷ ವಯಸ್ಸಾಗಿತ್ತು. ಅವರ
ತರುವಾಯ ದೇಶವನ್ನು ಇಂಗ್ಲಿಷರು ತಮ್ಮ ಸರ್ಕಾರಕ್ಕೆ ಸೇರಿಸಿಕೊ
ಳ್ಳಬೇಕೆಂದು ಕೆಲವರು ಚರ್ಚೆಮಾಡುತಿದ್ದರು. ಹಾಗೆ ಒಂದು
ವೇಳೆ ಇಂಗ್ಲಿಷ್ ಸರ್ಕಾರದವರು ಸೇರಿಕೊಂಡರೆ ಈಗಿನ ಮೈಸೂರು
ಸೀಮೆಯಲ್ಲಿ ತ್ರಿಪ್ವೇಕವನ್ನು ನಿಜಾಮನಿಗೆ ಕೊಡಬೇಕಾಗುವುದು.
ಮತ್ತು ೧೮೦೦ ನೇ ಈಸವಿಯಲ್ಲಿ ಇಂಗ್ಲಿಷರು ನಿಸಾಮನೊಡನೆ
ಪ್ರತ್ಯೇಕವಾಗಿ ತಂತಮ್ಮ ರಾಜ್ಯಸಂರಕ್ಷಣೆಗೋಸ್ಕರ ಮಾಡಿಕೊಂ
ಡಿದ್ದ ತಹಾನಾಮೆಯಂತೆ ನಿಸಾಮನು ಇಂಗ್ಲಿಷರಿಗೆ ಮಾಡಿದ ಸಹಾ
ಯವೂ ಗಣನೀಯವಾಗಿತ್ತು. ಈ ಹಕ್ಕನ್ನಾದರೂ ಪರ್ಯಾಲೋಚಿ
ಸಿ ಅದಕ್ಕೆ ಬದಲಾಗಿ ಬೀರಾರು ದೇಶವನ್ನು ಇಂಗ್ಲಿಷರು ನಿಸಾ
ಮನ ಸ್ವಾಧೀನಕ್ಕೆ ಕೊಡಬೇಕೆಂದು ೧೮೬೭ನೇ ಈಸವಿ ಅಕ್ಟೋ
ಬರು ತಿಂಗಳಲ್ಲಿ ಸಾಲಾರಜಂಗನು ಅಫಸಲ್‌ಉದ್ದೌಲನ ಪರ

ವಾಗಿ ಕಲ್‌ಕತ್ತಾ ಸರ್ಕಾರಕ್ಕೆ ಒಂದು ಕರೀತವನ್ನು ಬರೆಯಿಸಿ ದನು. ಅದುವರೆಗೆ ನಿಸಾಮನಿಗೂ ವಸೀರನಿಗೂ ಅನೇಕವೇಳೆ ಅಸಮಾಧಾನಗಳು ಹುಟ್ಟಿ ಸಾಲಾರಜಂಗನು ತನ್ನ ಕೆಲಸಕ್ಕೆ ರಾ ಜೀನಾಮೆಯನ್ನು ಕೊಡಬೇಕೆಂದು ಯೋಚಿಸಿಕೊಂಡಿದ್ದನಷ್ಟೆ. ಇಂ ಥಾ ಅಸಮಾಧಾನಗಳು ಯಾವುದನ್ನೂ ಗಣನೆಗೆ ತಾರದೆ ಆ ಮಂ ತ್ರಿಯು ದೇಶಾಭಿಮಾನದಿಂದಲೂ ಸ್ವಾಮಿಭಕ್ತಿಯಿಂದಲೂ ಮೇಲೆ ಕಂಡಂತೆ ಕಲ್‌ಕತ್ತಾಕ್ಕೆ ಬರೆಯಿಸಿದನು. ಈ ಮೈಸೂರನ್ನು ಬ್ರಿಟ ಷರು ಆಕ್ರಮಿಸಿಕೊಳ್ಳುವ ವಿಚಾರದಲ್ಲಿ ಸಾಲಾರಜಂಗನ ಲೇಖನವು ದೊಡ್ಡ ತೊಡಕನ್ನು ಹಾಕಿತು. ಟೀಪುವಿನ ರಾಜ್ಯವನ್ನು ಮುತ್ತಿ ಗೆದ್ದು ಕೊಳ್ಳಲು ಮೂರು ಸಂಸ್ಥಾನಿಕರೂ ಕರಾರ ಮಾಡಿಕೊಂಡದ್ದು ಸುಳ್ಳೆ? ಆ ಕರಾರಿನಂತೆ ಮೂರು ಸಂಸ್ಥಾನದವರೂ ಅವನ ರಾಜ್ಯ ವನ್ನು ಮೂರು ಭಾಗಮಾಡಿಕೊಳ್ಳಬೇಕೆಂದು ಒಪ್ಪಿದ್ದು ಸುಳ್ಳೆ? ಅದರಂತೆ ನಿಸಾಮನು ಶ್ರೀರಂಗಪಟ್ಟಣವನ್ನು ಇಂಗ್ಲಿಷರು ತೆಗೆದು ಕೊಳ್ಳುವಾಗ ಸಹಾಯ ಮಾಡಿದ್ದು ಸುಳ್ಳೆ? ಈಗಿನ ಮೈಸೂರು ಸೀಮೆಯು ಆರಾಜ್ಯದಲ್ಲಿ ಒಂದು ಭಾಗವಾಗಿದ್ದದು ಸುಳ್ಳೆ? ಈಗಿನ ಮೈಸೂರು ರಾಜ್ಯವನ್ನು ಇಂಗ್ಲಿಷರು ಸೇರಿಸಿಕೊಂಡರೆ ತ್ರಿಪ್ಪ್ವೇಕ ವನ್ನು ನಿಸಾಮನಿಗೆ ಕೊಡತಕ್ಕದ್ದು ಯುಕ್ತವಲ್ಲವೆ? ಇದೇ ಮೊದ ಲಾದ ಸಂಗತಿಗಳೆಲ್ಲಾ ಮಥನವಾಯಿತು. ಮೇಲೆ ಕಂಡ ಸಂಗ ತಿಯಾವುದೂ ಸುಳ್ಳಲ್ಲದಿರುವಾಗ ಮೈಸೂರು ಸೀಮೆಯಲ್ಲಿ ತನಗೆ ತ್ರಿಪ್ಪ್ವೇಕ ಬರಬೇಕೆಂದು ಸಾಲಾರಜಂಗನು ಕೇಳತಕ್ಕದ್ದು ನ್ಯಾಯ ವಾಗಿದೆ. ಈ ಭಾಗದಲ್ಲಿ ಇವನು ಮಾಡಿದ ರಾಜತಂತ್ರವು ಕೇವಲ ಸ್ವಪ್ರಯೋಜನಕ್ಕೇ ಎಂದು ಹೇಳಲು ಆಗುವುದಿಲ್ಲ. ಮೈಸೂರು ಸೀಮೆಯು ಮುಮ್ಮಡಿ ಶ್ರೀಕೃಷ್ಣರಾಜಒಡೆಯರ ಕಾಲಾನಂತರ

ಅವರ ರಾಜ್ಯವನ್ನು ಬ್ರಿಟಿಷ್‌ನವರು ಸೇರಿಸಿಕೊಳ್ಳಬೇಕೆಂಬ ಆಲೋಚನೆ ಇಂಗ್ಲಿಷ್ ಅಧಿಕಾರಿಗಳ ಮನಸ್ಸಿನಲ್ಲಿ ಚೆನ್ನಾಗಿ ನಾಟಿಕೊಂಡಿತ್ತು. ಅದಕ್ಕೆ ಅನುಸಾರವಾಗಿ ಮೈಸೂರಿನ ರಾಜ್ಯಭಾರದಲ್ಲಿ ಕೆಲವು ಬದಲಾವಣೆಗಳನ್ನು ಮಾಡಿದರು. ಈ ಸೀಮೆಯಲ್ಲಿ "ಮೈಸೂರ ದೊರೆಗಳ ಸೀಮೆ ರಾಜ್ಯಭಾರದ ಕಮಿಾಷನರ್" ಎಂಬ ಹೆಸರಿನಿಂದ ಸುಮಾರು ಮುವ್ವತ್ತು ವರುಷ ರಾಜ್ಯವಾಳಿದ ಕಬ್ಬನ್‌ಸಾಹೇಬನು ಆ ಕೆಲಸದಿಂದ ನಿವೃತ್ತನಾದಮೇಲೆ, ಆ ಪದವಿಗೆ ಬಂದ ಅಧಿಕಾರಿಗಳಿಗೆ "ಮೈಸೂರು ಚೀಫ್‌ಕಮಿಾಷನರ್" ಎಂದು ಹೆಸರಿಟ್ಟು ರಾಜ್ಯದ ಸಿಬ್ಬಂದಿಯನ್ನು ಬೇಕಾದಷ್ಟು ಹೆಚ್ಚಿಸಿ, ಇಂಗ್ಲಿಷರ ರಾಜ್ಯದ ಏರ್ಪಾಡನ್ನೆಲ್ಲಾ ಮಾಡಿದರು. "ಇತಃಪರ ಮೈಸೂರು ಸಂಸ್ಥಾನವನ್ನು ಕಲ್‌ಕತ್ತಾ ಸರ್ಕಾರದವರು ತಮ್ಮರಾಷ್ಟ್ರಕ್ಕೇ ಸೇರಿಸಿಕೊಂಡಿದಾರೆ" ಎಂಬ ಹುಕುಂ ಹುಟ್ಟುವುದೊಂದೇ ಬಾಕಿಯಿತ್ತು,

ಈ ಸಂದರ್ಭದಲ್ಲಿ ತಮ್ಮ ಪುತ್ರರಾದ ಚಾಮರಾಜಒಡೆಯರ ದತ್ತುವನ್ನು ಅಂಗೀಕಾರಮಾಡುವುದರ ಮೂಲಕ ತಮ್ಮ ರಾಜ್ಯವನ್ನು ಪುನಃ ತಮ್ಮ ಆಳ್ವಿಕೆಗೆ ಕೊಡಿಸಬೇಕೆಂದು ಮುಮ್ಮಡಿ ಕೃಷ್ಣರಾಜ ಪ್ರಭುವು ಅಗಾಧವಾದ ಪ್ರಯತ್ನವನ್ನು ನಡಿಸುತಾ ಇದ್ದರು. ಈ ಸಂದರ್ಭದಲ್ಲಿ ಮದರಾಸಿನ ಭಾರಿವರ್ತಕ ಲಕ್ಷ್ಮೀನರಸುನಾಯಡು ಮೊದಲಾದ ದೇಶಾಭಿಮಾನಿಗಳು ನಡಿಸಿದ ಪ್ರಯತ್ನದಿಂದ ಈ ವಿಚಾರವಾಗಿ ಸಾಲಾರಜಂಗನು ನಿಷ್ಕರ್ಷೆಮಾಡಿಕೊಂಡು ಕಲ್‌ಕತ್ತಾಕ್ಕೆ ಮೇಲೆ ಕಂಡಂತೆ ಕರೀತವನ್ನು ಬರಿಸಿದನು. ಇದು ಸಾಧಾರಣವಾದ ವಿಚಾರವಾಗಲಿಲ್ಲ. ಮೈಸೂರು ಸೀಮೆಯನ್ನು ನಿಷ್ಕಾರಣವಾಗಿ ಸೇರಿಸಿಕೊಂಡರೆಂಬ ಒಂದು ಅಪವಾದವು ಇಂಗ್ಲಿಷ್ ಸರ್ಕಾರಕ್ಕೆ ತಪ್ಪುವುದಿಲ್ಲ. ಆದರೆ ತ್ರಿಸ್ಪೇಕನ ರಾಜ್ಯವನ್ನು

ನಿಸಾಮನಿಗೆ ಕರಾರಿನ ಪ್ರಕಾರ ಕೊಡಬೇಕಲ್ಲಾ ಎಂಬ ಯೋಚನೆ ಬಲವಾಯಿತು. ಈ ಸಂದರ್ಭದಲ್ಲಿ ಬೀರಾರನ್ನು ತಮಗೆ ಇಂಗ್ಲಿಷರು ಬಿಟ್ಟುಕೊಡಬೇಕೆಂದೂ ಸಹಾ ಸಾಲಾರಜಂಗನು ಮಾಡ ತಕ್ಕ ವರಾತೂ ಬಲವಾಯಿತು. ಮೈಸೂರಿನಲ್ಲಿ ತ್ರಿಷ್ವೇಕವನ್ನೇ ನಿಸಾಂ ಸರ್ಕಾರಕ್ಕೆ ಕೊಡಬೇಕೆಂದು ತಗಾದೆ ಮಾಡಿದರೆ, ಇದನ್ನು ತಪ್ಪಿಸಿಕೊಳ್ಳುವುದಕ್ಕಾಗಿ, ಮೈಸೂರ ರಾಷ್ಟ್ರವನ್ನು ಇಂಗ್ಲಿಷರು ಸೇರಿಸಿಕೊಳ್ಳದೆ ಕೃಷ್ಣರಾಜಒಡೆಯರವರಿಗೆ ಹಿಂತಿರುಗಿ ಕೊಡಬಹುದು, ಅಥವಾ ತ್ರಿಷ್ವೇಕದ ಸೀಮೆಯನ್ನು ನಿಸಾಮನ ಪಾಲಿಗೆ ತೆಗೆದುಕೊಂಡು ಅದನ್ನಾದರೂ ತಮ್ಮ ಕಡೆಯಿಂದ ಮೈಸೂರ ದೊರೆಗಳಿಗೆ ಕೊಟ್ಟು ಹೋದ್ದು ಹೋಗುತಾ ಉಳಿದ ಸೀಮೆಯು ಮಟ್ಟಿಗಾದರೂ ಆ ಪುರಾತನ ಸಂಸ್ಥಾನವನ್ನು ನಿಲ್ಲಿಸಬೇಕು, ಎಂದು ಸಾಲಾರಜಂಗನು ನಿಶ್ಚೈಸಿಕೊಂಡು ಜಿತವಾಗಿ ಹಿಡಿದನು. ಕಡೆಗೆ ವಿಶೇಷವಾಗಿ ನಡಿಸಿದ ಪ್ರಯತ್ನಫಲದಿಂದ ಇಂಗ್ಲಿಷ್ ಸರ್ಕಾರದವರು ಪೂರ್ವಾಪರವನ್ನು ಯೋಚಿಸಿ ಮೈಸೂರ ಸೀಮೆ ವಿಶಿಷ್ಠವನ್ನೂ ಅಲ್ಲಿನ ರಾಜಸಂತತಿಯವರಿಗೆ ಕೊಟ್ಟುಬಿಟ್ಟರು. ಈಗಿನ ಮೈಸೂರು ಸಂಸ್ಥಾನವು ಉಳಿಯುವುದಕ್ಕೆ ಸಾಲಾರಜಂಗನ ಪ್ರಯತ್ನವೂ ಬಹಳ ದೊಡ್ಡದಾಗಿತ್ತು. ಈತನಿಂದಲೇ ಮೈಸೂರು ಬಲವಾಗಿ ನಿಂತು ಕೊಂಡಿತು. ಬ್ರಿಟಿಷ್ ಸರ್ಕಾರದವರು ಆಗ್ರಹದಿಂದ ಸಾಲಾರ

ಬ್ರಿಟಿಷ್ ಸರ್ಕಾರದವರ ಉತ್ತರ.

ಜಂಗನ ಆಕರೀತಕ್ಕೆ ಕೊಟ್ಟ ಅಸಂಬದ್ಧವಾದ ಜವಾಬಿನಲ್ಲಿ ಮೇಲುಮೇಲಕ್ಕೆ ತಮ್ಮ ಪೇರ್ಮೆಯನ್ನು ತೋರಿಸುತಾ ಅಸಮಾಧಾನದ್ಯೋತಕವಾದ ಅಭಿಪ್ರಾಯವನ್ನು ನಮೂದಿಸಿದ್ದು ಹೇಗೆಂದರೆ:—

"ಸರ್‌ಸಾಲಾರಜಂಗರವರ ಲೇಖನದಲ್ಲಿ ದ್ಯೋತಕ
"ವಾಗುವ ಸ್ವಪ್ರತಿಷ್ಟೆಯು ಅರ್ಥವು ಅವರ ಯಜಮಾನರ
"ರಾಜಪದವಿಗೂ ಮತ್ತು ಶ್ರೇಷ್ಠವಾದ ಮಂತ್ರಿತ್ವಕ್ಕೆವಸೀ
"ರರಿಗೆ ಬಂದಿರುವ ಖ್ಯಾತಿಗೂ ತಕ್ಕದ್ದಾಗಿಲ್ಲ. ಆದ್ದರಿಂದ
"ಹೈದರಾಬಾದು ದರ್ಬಾರಿನವರು ಮುಂದೆ ವಕ್ಕಣಿಸುವ
"ಲೇಖನಗಳಲ್ಲೆಲ್ಲಾ ಹೆಚ್ಚಾದ ಗಾಂಭೀರ್ಯವೂ ಜಾಗರೂ
"ಕತೆಯೂ ಇರಬೇಕೆಂದು ಗವರ್ನರ್ ಜನರಲ್‌ಸಾಹೇಬರು
"ಅಪೇಕ್ಷಿಸುವುದು ಹೊರತು ಮತ್ತೆ ಯಾವಆಶಯವೂ
"ಇರುವುದಿಲ್ಲ"

ಸಾಲಾರಜಂಗನು ಇದಕ್ಕೆಲ್ಲಾ ಹೆದರಿಕೊಂಡು ಆಶಾಭಂಗವಾಗಿ ಕೂತುಕೊಳ್ಳತಕ್ಕವನಲ್ಲ. ಜಗಳಕ್ಕೆ ಇನ್ನೊಂದು ಹೊಸ ದಾರಿ ತೆಗೆದ. ಆದರೆ ಇಂಡಿಯಾ ಸರ್ಕಾರದವರು ಈ ಉತ್ತರದಲ್ಲಿಟ್ಟಿದ್ದ ಆಶೆಯ ಬಿಂದುಕಿರಣ ಮಾತ್ರ ಮಿಣುಗುಟ್ಟುತಿತ್ತು. ಕಂಟಿಂಜಂಟು ಎಂಬ ಸಹಾಯಸೇನೆಗೆ ಕ್ಲಿಪ್ತವಾಗಿ ಸಂಬಳವನ್ನು ಕೊಡಲು ತೃಪ್ತಿಕರವಾದ ಏರ್ಪಾಡನ್ನು ಮಾಡದೇ ಇರುವಾಗ ಬೀರಾರು ದೇಶವನ್ನು ಹಿಂತಿರುಗಿ ನಿಜಾಂ ಸರ್ಕಾರಕ್ಕೆ ಕೊಡೋಣವು ಅಸಾಧ್ಯಪ್ರಮೇಯವೆಂದು ಇಂಡಿಯಾ ಸರ್ಕಾರದವರ ಲೇಖನದಲ್ಲಿ ನಮೂದಿಸಿರುವುದೇ ಆ ಆಶೆಯ ಕಿರಣವಾಗಿತ್ತು.

ಹೀಗಿರಲಾಗಿ ನಿಜಾಂ ಅಫಜಲ್ ಉದ್ದೌಲನು ತೀರಿಹೋಗಿ ಮೀರ್ ಮಹಬೂಬನಿಗೆ ಪಟ್ಟವಾಯಿತಷ್ಟೆ. ಇವರ ಬಾಲ್ಯಾವಸ್ಥೆಯಲ್ಲಿ ಸಾಲಾರುಜಂಗನಿಗೆ ರಾಜಪ್ರತಿನಿಧಿ (Regent) ಪದವಿಬಂತು. ಇವನೂ ಮತ್ತು ಜೊತೆಗ ನಿಜಾಂ ಮನೆತನಕ್ಕೆ ಸೇರಿದ ಅಮೀರಿಕಬೀರ್ ಎಂಬ ಪುರುಷ ಶ್ರೇಷ್ಠನೂ ಇಬ್ಬರೂ ಸೇರಿ ರಾಜ್ಯಭಾರವನ್ನು

ನಡಿಸತಕ್ಕದೆಂದು ಗೊತ್ತಾಯಿತು. ಸಾಲಾರಜಂಗನು ರಾಜ್ಯಭಾರ ಕ್ರಮದಲ್ಲಿ ಮಾಡಬೇಕೆಂದು ಇದ್ದ ಏರ್ಪಾಡುಗಳನ್ನು ಯಾವ ಪ್ರತಿಬಂಧಕವೂ ಇಲ್ಲದೆ ನಡಿಸಲು ಈಗ ಸಮಯ ದೊರೆಯಿತು. ಈತನ ಯೋಗ್ಯತೆಯನ್ನು ಮೆಚ್ಚಿ ಇಂಡಿಯಾ ಸರ್ಕಾರದವರು ಈ ಮಂತ್ರಿಶ್ರೇಷ್ಠನಿಗೆ ಜಿ. ಸಿ. ಎಸ್. ಐ., ಎಂಬ ಬಿರುದನ್ನು ಕೊಟ್ಟರು. ಏನುಮಾಡಿದಾಗ್ಯೂ ಬೀರಾರನ್ನು ಸಾಧಿಸಿಕೊಳ್ಳುವ ವಿಚಾರದಲ್ಲಿ ಮೊದಲು ತಾನು ಮಾಡಿದ ಉಪಾಯ ಕೆಟ್ಟು ಹೋದ್ದಕ್ಕೆ ಬದಲಾಗಿ ಬೇರೆ ಉಪಾಯವನ್ನು ಹೂಡಿದನು. ಉತ್ತಮ ಪುರುಷರು ಒಂದು ಕಾರ್ಯಕ್ಕೆ ಆರಂಭಮಾಡುವುದೇ ಇಲ್ಲ, ಒಂದು ವೇಳೆ ಆರಂಭಮಾಡಿದರೆ ಹಿಡಿದ ಕಾರ್ಯ ಸಾಧನೆ ಯಾಗುವುದಕ್ಕೆ ಬೇಕಾದ್ದನ್ನೆಲ್ಲಾ ಮಾಡಿ ಬಂದ ಪ್ರತಿಬಂಧಕಗಳೆಲ್ಲವನ್ನೂ ನಿವಾರಣೆಮಾಡಿಕೊಂಡು ತಮ್ಮ ಹಠವನ್ನು ಸಾಧಿಸುತಾರೆ. ಕಂಟಿಂಜಂಟು ಸೇನೆಯವರಿಗೆ ತಪ್ಪದೆ ಸಂಬಳ ಕೊಡುವ ಆಧಾರಕ್ಕೇ ಅಲ್ಲವೆ ಇಂಗ್ಲಿಷರು ಬೀರಾರನ್ನು ತೆಗೆದುಕೊಂಡಿರತಕ್ಕದ್ದು. ಅದಕ್ಕೆ ಆ ವಸೀರನೂ, ನಿಸಾಂ ಸರ್ಕಾರದ ಸಭೆಯವರೂ, ಇಂಡಿಯಾ ಸರ್ಕಾರಕ್ಕೆ ೧೮೭೨ರಲ್ಲಿ ಇನ್ನೊಂದು ಹೊಸ ಸಲಹೆಯನ್ನು ಮಾಡಿದರು; ಅದರ ಪ್ರಕಾರ ಬೀರಾರು ದೇಶವನ್ನು ಬ್ರಿಟಿಷ್ ಸರ್ಕಾರದವರ ಆಡಳತದಲ್ಲಿ ಬಿಟ್ಟಿರುವುದಕ್ಕೆ ಬದಲಾಗಿ ೮೦,೦೦,೦೦೦ ಪೌನು ಅಥವಾ ಸುಮಾರು ಹತ್ತು ಕೋಟಿ ರೂಪಾಯಿಯನ್ನು ನಿಸಾಂ ಸರ್ಕಾರದವರು ಠೇವಣಿಯಾಗಿ ಇಡುವುದಾಗಿಯೂ, ಅದರ ವೃದ್ಧ್ಯಂಶದಿಂದ ಕಂಟಿಂಜಂಟು ಸಹಾಯ ಸೇನೆಯ ಸಂಬಳ

ಜಿ. ಸಿ. ಎಸ್. ಐ., ಬಿರದು ಬಂದದ್ದು.

ಸಾಲಾರಜಂಗನು ನಗದು ಠೇವಣಿ ಕೊಡುತೇನೆಂದದ್ದು.

ವನ್ನು ಕೊಡಬಹುದೆಂತಲೂ ಸೂಚಿಸಿದರು. ಇಂಡಿಯಾ ಸರ್ಕಾರದವರು ಮೇಲೆಕಂಡಕರೀತಕ್ಕೆ ಒಂದು ವರುಷದ ತರುವಾಯ ವಿಚಿತ್ರವಾದ ಒಂದು ಉತ್ತರವನ್ನು ಕೊಟ್ಟರು: ಸರ್ ೧೮೫೩ ಮತ್ತು ೧೮೬೦ ಈ ವರುಷಗಳಲ್ಲಿ ನಡೆದ ಕರಾರಿಗೆ ಸದರಿ ದಂಡಿನ ವೆಚ್ಚದ ಹಣವು ಒಂದು ಸೀಮೆಯನ್ನೇ ಆಧಾರ ಉಳ್ಳದ್ದಾಗಿರಬೇಕೆಂಬುವುದೇ ಮುಖ್ಯವಾದ ಅಸ್ತಿಭಾರ ಎಂದು ಆ ಜವಾಬಿನಲ್ಲಿ ನಮೂದಿತ್ತು.

ಇಂಡಿಯಾ ಸರ್ಕಾರದ ವಿಚಿತ್ರವಾದ ಜವಾಬು.

ಸಾಲಾರಜಂಗನಿಗೆ ಇದಕ್ಕೂ ನಿರಾಶೆಯಾಗಲಿಲ್ಲ. ತನ್ನ ಮತವನ್ನು ಸಾಧಿಸಲು ಇನ್ನೊಂದು ಹೊಸ ದಾರಿ ತೆಗೆದನು. ಆಗ ನಿಸಾಂ ಸರ್ಕಾರದವರು ಮೇಲೆ ಕಂಡ ತಹಾನಾಮೆಗಳಿಗೆ ಹಾಗೆ ಅರ್ಥವಲ್ಲವೆಂದು ತಿಳಿಸಿದ್ದಲ್ಲದೆ, ಬೀರಾರಿಗೆ ಬದಲಾಗಿ ನಗದು ಠೇವಣಿಯನ್ನು ಕೂಡ ಅಂಗೀಕಾರಮಾಡದೇ ಇರುವುದಾದರೆ, ೧೮೫೩ರಲ್ಲಿ ನಡೆದ ಕರಾರಿನಪ್ರಕಾರ ಜರಗಬೇಕೆಂತಲೂ. ಸಹಾಯಸೇನೆಯ ಉಪಯೋಗವು ನಿಸಾಮನಿಗೆ ಅಗತ್ಯವಿಲ್ಲದಿರುವಾಗ ಆ ದಂಡನ್ನು ಒಡೆದುಬಿಡತಕ್ಕದ್ದೇ ಅಗತ್ಯವಾಗಿದೆ ಎಂತಲೂ, ಹೈದರಾಬಾದು ಸರ್ಕಾರದವರು ಒಕ್ಕಣಿಸಿದರು.

ಸಹಾಯಸೇನೆಅಗತ್ಯವಿಲ್ಲವೆಂದದ್ದು.

ಇದನ್ನು ತಣ್ಣಗೆ ಮಾಡುವುದಕ್ಕೆ ಒಂದು ಕುಂಟು ದಾರಿಯನ್ನು ಹುಡುಕಬೇಕಾಯಿತು. ಸಾಲಾರಜಂಗನ ಮೇಲೆ ಇದ್ದ ಕೇಣಸರವನ್ನು ತೀರಿಸಿಕೊಳ್ಳುವುದಕ್ಕಾಗಿ ಕೆಲವು ಮುಸಲ್ಮಾನ್ ಪುರುಷಶ್ರೇಷ್ಠರು ರೆಸಿಡೆಂಟನ ಕಡೆಗೆ ಸೇರಿಕೊಂಡರು. ಇದೇ ರೆಸಿಡೆಂಟನು ಸರ್ ೧೮೬೯-೭೦ನೇ ವರುಷದ ವಾರ್ಷಿಕ ರಾಜ್ಯಭಾರ ವಿವರಣ ಲೇಖನದಲ್ಲಿ—ಹೈದರಾಬಾದಿನ ಮುಸಲ್ಮಾನ್ ಉಂದಾಗಳಿಗೆ ಮಂತ್ರಿಯ ವಿಷಯದಲ್ಲಿರುವ ದುಜ್ಭೆಯು

ದೆಸೆಯಿಂದ ಹುಟ್ಟುವ ಪಿತೂರಿಯನ್ನು ಅಡಗಿಸುವುದು ಕಷ್ಟ; ಈ ಉಂದಾಗಳು ಸ್ವತಂತ್ರಿಸಿ ರೆಸಿಡೆಸಿಗೆ ಪದೇ ಪದೇ ಬರುವು ದನ್ನು ನಿಲ್ಲಿಸಲೇ ಬೇಕಾಗಿದೆ; ಹಾಗಿಲ್ಲವಾದರೆ ಸಾಲಾರಜಂಗ ನಂಥಾ ಶಕ್ತನಾದ ಮಂತ್ರಿಗೂ ರಾಜ್ಯದ ಆಡಳತವನ್ನು ನಡಿಸು ವುದು ದುಸ್ತರ; ಇವರ ಪಿತೂರಿಗಳೂ, ಕ್ಷುದ್ರಗಳೂ, ಮಂತ್ರಿಯ ಮನಸ್ಸನ್ನು ಕೆಡಿಸಿ ಆತನು ತನ್ನ ಉದ್ಯೋಗವನ್ನು ಬಿಟ್ಟುಬಿಡು ವ ಭಯ ಕೂಡ ಇದೆ; ಹೀಗಾದರೆ ಮಂತ್ರಿಯ ಪದವಿಗೆ ತಕ್ಕಂ ಥಾ ಯೋಗ್ಯರು ಇನ್ನು ಯಾರೂ ದೊರೆಯುವ ಹಾಗಿಲ್ಲ. ಹೈದ ರಾಬಾದಿನ ಉಂದಾಗಳ ವಿಚಾರದಲ್ಲಿ ಇಂಥಾ ಅಭಿಪ್ರಾಯವನ್ನು ಮೊದಲು ತಾನು ಇಟ್ಟುಕೊಂಡಿದ್ದಾಗ್ಯೂ, ರೆಸಿಡೆಂಟನಾಗಿದ್ದ ಜೆ. ಬಿ. ಸಾಂಡರ್ಸನು ಇಂಡಿಯಾ ಸರ್ಕಾರದವರ ಅಭಿಮತವನ್ನು ಸಾಧಿ ಸುವುದಕ್ಕೆ ಇನ್ನೊಂದು ಹೊಸ ದಾರಿಯನ್ನು ಹುಡುಕಿದನು.

ರೆಸಿಡೆಂಟನ ಕುಂಟುದಾರಿ.

ರೆಸಿಡೆಂಟನು ಮಂತ್ರಿಯೇ ಮುಖ್ಯವಾಗಿ ರಾಜಪ್ರತಿನಿಧಿ ಸಭೆಯ ವರನ್ನೂ ಇವರಿಗೆ ಶುದ್ಧವಾಗಿ ವಿರೋಧಿಗಳಾಗಿರು ವ ಉಂದಾಗಳನ್ನೂ ತನ್ನ ಬಂಗಲೆಗೆ ಒಂದುದಿವ ಸ ಊಟಕ್ಕೆ ಕರೆದನು. ತರುವಾಯ ಎಲ್ಲರೂ ಸೇ ರಿರುವ ಕಾಲದಲ್ಲಿ ನಿಸಾಂ ಸರ್ಕಾರದವರನ್ನು ಕುರಿತು—ಬೀರಾರು ದೇಶವನ್ನು ಹಿಂತಿರುಗಿ ನಿಸಾಂ ಸರ್ಕಾರಕ್ಕೆ ಕೊಡುವುದಿಲ್ಲವೆಂದು ಇಂ ಡಿಯಾ ಸರ್ಕಾರದವರು ಖಂಡಿತಮಾಡಿದಾರೆ, ಈ ವಿಚಾರಕ್ಕೆ ಕಲ್ ಕತ್ತಾ ಸರ್ಕಾರಕ್ಕೆ ನಿಸಾಮರಕರೀತವನ್ನು ಕಳುಹಿಸುವುದಕ್ಕಾಗಿ ಇನ್ನು ಯಾವ ಲೇಖನವನ್ನೂ ತಾನು ಅಂಗೀಕರಿಸುವುದಿಲ್ಲವೆಂದು ಹೇಳಿದನು.

ಸಾಲಾರಜಂಗನು ಕರೀತವನ್ನು ವಾಪಸು ಕಳುಹಿಸಿದ್ದು.

ಇದಕ್ಕೆ ಧೀರನಾದ ಆ ಮಂತ್ರಿಯು ಹೆದಲಿರಲ್ಲ. ಇಷ್ಟು ಅಲ್ಪವಾದ ಉಪಾಯದಿಂದ ಆತನನ್ನು ಸುಮ್ಮನೇ ಕೂರಿಸುವುದು ಕಷ್ಟವಾಗಿತ್ತು. ಕೂಡಲೆ ಹೈದರಾಬಾದಿನ ಸರ್ಕಾರದವರು ಪುನಃ ಈ ವಿಷಯವನ್ನು ಕುರಿತು ಬರೆದು ಕಳುಹಿಸಿದರು. ರೆಸಿಡೆಂಟನು ಆ ಲೇಖನವನ್ನು ಹಿಂತಿರುಗಿ ಕಳುಹಿಸಿದನು. ಸಾಲಾರಜಂಗನು ಪುನಃ ಅದೇ ಕಾಗದವನ್ನು ಸಾಂಡರ್ಸನಿಗೆ ವಾಪಸು ಮಾಡಿದನು. ಆಗ ರೆಸಿಡೆಂಟು ಸಾಹೇಬರಿಗೆ ಅತ್ಯಾಗ್ರಹ ಬಂತು. ಅದಕ್ಕೆ ಅವನು ಉತ್ತರವಾಗಿ ಬರೆದು ಕಳುಹಿಸಿದ್ದೇನೆಂದರೆ:—

ಸಾಂಡರ್ಸನ ಜವಾಬು.

"ಈರೀತಿಯಲ್ಲಿ ವಾಪಸು ಕಳುಹಿಸಿದ ಕಾ"ಗದವನ್ನು ಪುನಃ ಪುನಃ ಹಿಂತುರುಗಿಸುವುದು "ಮರ್ಯಾದೆಯಲ್ಲ, ಒಂದು ಸಾರಿ ವ್ಯವಸ್ಥೆಯಾದ "ವಿಚಾರದಲ್ಲಿ ಪಟ್ಟು ಹಿಡಿದು ಕಡೆಯುವುದರಿಂದ ಯಾವ "ಪ್ರಯೋಜನವೂ ಉಂಟಾಗಲಾರದು. ಇಂಥಾ ಹಠವನ್ನು "ನೋಡಿಕೊಂಡು ಸುಮ್ಮನೇ ಇರುವುದಕ್ಕೂ ಆಗಲಾರದು. "ಹೀಗೆ ಮಾಡುವುದರಿಂದ ನಿಮ್ಮಲ್ಲಿ ಇಂಡಿಯಾ ಸರ್ಕಾರದವ"ರಿಗೆ ಇರುವ ಅಭಿಮಾನ ಕಡಮೆಯಾಗಬಹುದು. ನಿಸಾ"ಮನ ಬಾಲ್ಯಾವಸ್ಥೆಯೊಳಗೆ ಹೀಗಾಗುವುದು ಸಮನಲ್ಲ."

ಹೀಗೆಂದು ರೆಸಿಡೆಂಟನು ಕಠಿಣೋಕ್ತಿಗಳನ್ನು ಪ್ರಯೋಗಿಸಿ ಉತ್ತರವನ್ನು ಬರಸಿದನು. ಇದರಿಂದೆಲ್ಲಾ ಇಂಡಿಯಾ ಸರಾರದವರೊಡನೆ ಪೂರ್ವದಲ್ಲಿದ್ದ ಮೈತ್ರಿ ಹೋಗಿ ವೈಸಮ್ಯಕ್ಕೆ ಇಟ್ಟುಕೊಂಡಿತು.

ರೆಸಿಡೆಂಟು ಸಾಂಡರ್ಸ್ ಸಾಹೇಬನ ಡೊಂಕುಮಾರ್ಗವು ಸರಿಬೀಳದೆ ಹೋದ್ದರಿಂದ ಹುಟ್ಟಿದ ತೊಂದರೆಯ ಜೊತೆಗೆ ಇನ್ನೊಂದು ಗಲಭೆ ಸೇರಿತು. ನಿಸಾಂ ಮೀರ್‌ಮಹಬೂಬಲ್ಲಿಗೆ ಆರು ವರುಷವಾಗುತಾ ಬಂತು. ಆತನ ವಿದ್ಯಾಭ್ಯಾಸದ ವಿಚಾರದಲ್ಲಿ ಯಾವ ಸರಿಯಾದ ಏರ್ಪಾಡೂ ಆಗಲಿಲ್ಲ. ಇದಕ್ಕೆ ತಕ್ಕಂಥವರನ್ನು ಖಂಡಿತವಾಗಿ ನೇಮಿಸಲೇಬೇಕೆಂದು ಕಲ್‌ಕತ್ತಾ ಸರ್ಕಾರದವರು ಸಾಲಾರಜಂಗನಿಗೆ ಬರಿಸಲು ರೆಸಿಡೆಂಟನಿಗೆ ಹೇಳಲಾಗಿ, ಏನೂ ಉಪಯೋಗವಾಗಲಿಲ್ಲ. ಸನ್ ೧೮೭೩ರಲ್ಲಿ ಇದೇ ವಿದ್ಯಾಭ್ಯಾಸದ ಪ್ರಯತ್ನವನ್ನು ವೈಸರಾಯಿಯು ಬರಸಲಾಗಿ, ಸಾಲಾರಜಂಗನು ನಿಸಾಮು ಬಾಲಕನೆಂತಲೂ, ದುರ್ಬಲನಾಗಿದಾನೆಂತಲೂ, ಓದಿ ಬರೆದು ಮಾಡಲು ಅಗತ್ಯವಾದ ಬುದ್ಧಿಕ್ಲೇಶವನ್ನು ತಡೆಯುವುದಕ್ಕೆ ಶಕ್ತಿಸಾಲದೆಂತಲೂ, ಕಾರಣಗಳನ್ನು ನಮೂದಿಸಿ ಉತ್ತರ ಬರೆಯಿಸಿದನು. ಇದಕ್ಕೆ ಬ್ರಿಟಿಷ್ ಸರ್ಕಾರದ ಸಂಬಂಧಿಗಳು ಅನೇಕರು ಅಪಾರ್ಥವನ್ನು ಕಲ್ಪಿಸಿದರು. ಬಲವಂತವಾಗಿ ವಿದ್ಯಾಭ್ಯಾಸ ಮಾಡಿಸುವ ವಿಷಯದಲ್ಲಿ ಜನಾನಿಯವರ ಆಗ್ರಹಕ್ಕೆ ಪಾತ್ರನಾದೇನು; ತಾನೇ ದೊರೆಯ ಹಾಗೆಕೂತು ಆಡಳತಗಳನ್ನು ಸ್ವತಂತ್ರವಾಗಿ ನಡಿಸತಕ್ಕ ಮಂತ್ರಿಯು ದೊರೆಯನ್ನು ವಿದ್ಯಾವಂತನಾಗಿ ಮಾಡಿ ತನ್ನ ಅಧಿಕಾರವನ್ನು ದುರ್ಬಲಮಾಡಿಕೊಳ್ಳುವ ಹಾಗಾದೀತು, ಎಂಬ ಸಂಶಯ ಆತನಿಗೆ ಇತ್ತೆಂದು ದೋಷಾರೋಪಣೆ ಮಾಡಬಹುದು. ಅಂಥಾ ಅಲ್ಪಬುದ್ಧಿಯು ಆತನಿಗೆ ಇರಲಿಲ್ಲವೆಂಬುವುದಕ್ಕೆ ಆತನ ಹಿಂದಿನ ನಡತೆಯೇ ಸಾಕಾಗಿದೆ. ಇಂಥಾ ದುರ್ಗುಣವನ್ನು ಆತನಲ್ಲಿ ಕಲ್ಪಿಸಿ ತಮ್ಮ ಕಾರ್ಯಸಾಧನೆಯನ್ನು ಮಾಡಿಕೊಳ್ಳತಕ್ಕ ಆಶೆಯು

ನಿಸಾಮನ ವಿದ್ಯಾಭ್ಯಾಸ ವಿಚಾರ.

ಕೆಲವು ಬ್ರಿಟಿಷ್ ಅಧಿಕಾರಿಗಳಿಗೆ ಇತ್ತಂಬ ಭಾಗದಲ್ಲಿ ಸಂಶಯವಿಲ್ಲ. ಜನಾನಿಯವರ ಅಭಿಮತವನ್ನು ಅನುಸರಿಸಿ ನಡೆಯಬೇಕೆಂಬುವುದು ಮಂತ್ರಿಯ ದೂರದೃಷ್ಟಿಯಾಗಿದೆ. ಲೋಕವ್ಯವಹಾರವನ್ನು ಅರಿಯದ ರಾಣಿವಾಸದವರಿಗೆ ತಿಳುವಳಿಕೆಯನ್ನು ಹೇಳಿ ಅವರ ಅನುಮತಿಯನ್ನು ಪಡೆದು ಬಾಲಕನಾದ ದೊರೆಗೆ ವಿದ್ಯಾಭ್ಯಾಸವನ್ನು ಜರಗಿಸಬೇಕೆಂಬುವುದು ಮುಖ್ಯ ಉದ್ದೇಶವಾಗಿತ್ತು. ಹಾಗಿರದೆ ಜನಾನಿಯವರಲ್ಲಿ ವಿರೋಧವನ್ನು ಕಟ್ಟಿಕೊಂಡು ರಸಾಭಾಸವಾಗಿ ವಸೀರನು ಕೆಲಸವನ್ನು ಬಿಟ್ಟಲ್ಲಿ, ರಾಜ್ಯಕ್ಷೇಮವನ್ನಾಗಲಿ, ರಾಜನ ಕ್ಷೇಮವನ್ನಾಗಲಿ ನೋಡಿದಂತೆ ಆಗುದಿವುಲ್ಲ. ಅಸಂದರ್ಭಕಾಲದಲ್ಲಿ ಬೇಕೆಂದು ಕೈಬಿಟ್ಟನೆಂಬ ಅಪವಾದವು ಪ್ರಾಪ್ತವಾಗುವುದು. ಮತ್ತು ಬ್ರಿಟಿಷ್ ಸರ್ಕಾರದವರೂ ಅಂಥಾ ಸ್ಥಿತಿ ಬರಬೇಕೆಂದು ಅಪೇಕ್ಷಿಸುವುದಿಲ್ಲವೆಂತ ಖಂಡಿತವಾಗಿ ಹೇಳಬಹುದು. ದೊರೆಯನ್ನು ತಯಾರ್ಮಾಡಿದರೆ ತನ್ನ ಅಧಿಕಾರಕ್ಕೆ ಊನ ಬರುವುದೆಂದು ಯೋಚಿಸುವ ಹಾಗೆ ಇದ್ದರೆ, ಹಿಂದಿನ ನಿಸಾಮನ ಕಾಲದಲ್ಲಿ ಎರಡು ಮೂರು ಸಾರಿ ಮಂತ್ರಿಯು ಕೆಲಸಕ್ಕೆ ರಾಜೀನಾಮೆ ಕೊಟ್ಟಿದ್ದನೆಂಬ ಮಾತು ಈ ಭಾಗದಲ್ಲಿ ವಿರೋಧಕಕ್ಷಿಯವರನ್ನು ನಿರಾಯುಧರನ್ನಾಗಿ ಮಾಡುವುದು. ಇಂಥಾದ್ದೆಲ್ಲಾ ಅಲ್ಪರ ದೃಷ್ಟಿಯಲ್ಲಿರತಕ್ಕ ಕಶ್ಮಲದ ಅಣುವಾಗಿದೆ.

ಉಪಾಧ್ಯಾಯನನ್ನು ಚುನಾಯಿಸಿದ್ದು.

ಕಡೆಗೆ ಇಂಡಿಯಾ ಸರ್ಕಾರದವರು ನಿಸಾಮನಿಗೆ ವಿದ್ಯಾಭ್ಯಾಸ ಮಾಡಿಸಲೇ ಬೇಕೆಂನು ನಿಷ್ಕರ್ಷೆಮಾಡಿ ಈ ಕೆಲಸಕ್ಕೆ ಸರಿಯಾದ ಮನುಷ್ಯನನ್ನು ಚುನಾಯಿಸಲು ೫ ಜನರನ್ನು ಸಭ್ಯರನ್ನಾಗಿ

ನೇಮಿಸಿದರು. ಅವರಲ್ಲಿ ಒಬ್ಬ ಮೊದಲು ರೆಸಿಡೆಂಟಾಗಿಯೂ ಇಬ್ಬರು ಆಸಿಸ್ಟೆಂಟು ರೆಸಿಡೆಂಟರಾಗಿಯೂ ಇದ್ದರು. ಈ ಮೂರು ಜನರ ಜೊತೆಗೆ ಕರ್ನಲ್ ವೊಲಿಫಾಂಟು, ಕರ್ನಲ್ ಮೆಡೋಸ್ ಟೇಲರ್ ಸಹಾ ಸೇರಿದ್ದರು. ಕಡೆಗೆ ಇವರೆಲ್ಲರೂ ಸೇರಿ ಹಿಂದಿನ ಬೊಂಬಾಯಿ ಗೌವರ್ನರ ಮಗನಾದ ಕಾಪ್ಟನ್ ಕ್ಲಾರ್ಕ ಎಂಬಾತನನ್ನು ನೇಮಿಸಿದರು. ಇವನಿಗೆ ತಿಂಗಳಿಗೆ ೨೦೦ ಪೌನು ಸಂಬಳ ಗೊತ್ತಾಯಿತು. ಈತನು ಸರಿಯಾಗಿ ಕೆಲಸಮಾಡಲು ಅನುಕೂಲಿಸಲಿಲ್ಲ. ರೆಸಿಡೆಂಟನ ಮಾತು ಕೂಡ ಜರಗಲಿಲ್ಲ. ಹೀಗಿದ್ದರೂ ಮಂತ್ರಿಯಮೇಲೆ ದೋಷಾರೋಪಣೆ ಮಾಡುವದಕ್ಕೆ ಕಾರಣವಿಲ್ಲ. ಆಗಿನ ಸ್ಥಿತಿಯಲ್ಲಿ ಆ ಚಿಕ್ಕ ನಿಸಾಮನಿಗೆ ಆದ್ದಕ್ಕಿಂತಲೂ ಹೆಚ್ಚಾದ ವಿದ್ಯಾಭ್ಯಾಸವನ್ನು ಮಾಡಿಸಲು ಸಾಧ್ಯವಿರಲೇ ಇಲ್ಲ.



# ೭ನೇ ಅಧ್ಯಾಯ.

## ಯೂರೋಫ್ ದೇಶಕ್ಕೆ ಪ್ರಯಾಣ.

ಮೇಲೆ ಹೇಳಿದ ಸಂವಿಧಾನಗಳೆಲ್ಲಾ ಜರಗುತಾ ಇರುವಾಗ ಸರ್ ೧೮೭೫ನೇ ಇಸವಿಯಲ್ಲಿ ವಿಕ್ಟೋರಿಯ ರಾಣಿಯ ಜ್ಯೇಷ್ಟಪುತ್ರ ಮತ್ತು ಯುವರಾಜನಾದ ಎಡ್‌ವರ್ಡ್ ಪ್ರಿನ್ಸ್ ಆಫ್ ವೇಲ್ಸನ ಸವಾರಿಯು ಇಂಡಿಯಾ ದೇಶಕ್ಕೆ ಬಂದಿತು. ಆ ರಾಜಕುಮಾರನು ಈ ದೇಶದಲ್ಲಿ ನೋಡಬೇಕೆಂದಿದ್ದ ಸ್ಥಳಗಳಪಟ್ಟಿಯಲ್ಲಿ ಹೈದರಾಬಾದು ಇರಲಿಲ್ಲ. ಇದಕ್ಕೆ ಕಾರಣ ಗೊತ್ತಾಗಲಿಲ್ಲ. ಬಾಲಕನಾದ ನಿಸಾಮನೇ ಕಲ್‌ಕತ್ತಾಕ್ಕೆ ಹೋಗಿ ರಾಜ್ಞಿಕುಮಾರನ ಭೇಟಿ ಮಾಡಿಕೊಳ್ಳಬೇಕೆಂದು ರೆಸಿಡೆಂಟು ಸಾಂಡರ್ಸನು ಬಲವಂತ ಮಾಡಿದನು. ಆಗ ಬಾಲಕನಾದ ನಿಸಾಮನ ದೇಹಸ್ಥಿತಿ ಸರಿಯಾಗಿರಲಿಲ್ಲ. ಆದ್ದರಿಂದ ದೂರ ಪ್ರಯಾಣಕ್ಕೆ ಆತನನ್ನು ಕಳುಹಿಸಲು ಆಗಲಾರದೆಂದು ಮಂತ್ರಿ ಬರೆದನು. ಇದು ನಿಜವೆ, ಸುಳ್ಳೇ ಎಂಬ ವಿಚಾರದಲ್ಲಿ ರೆಸಿಡೆಂಟನಿಗೂ ಸಾಲಾರಜಂಗನಿಗೂ, ವಿಶೇಷವಾಗಿ ಪತ್ರಪ್ರಸಂಗ ಜರಗಿತು. ಆಗ ರೆಸಿಡೆಂಟರ ಇಲಾಖೇ ಡಾಕ್ಟರು ಬಂದು ನೋಡಿ—ಕಲ್‌ಕತ್ತಾಕ್ಕೆ ಹೋಗಿಬರುವಷ್ಟು ಅತಾಡನ್ನು ತಡೆಯುವ ಮಟ್ಟಿಗೆ ನಿಸಾಮನ ದೇಹದ ಆರೋಗ್ಯವು ಸರಿಯಾಗಿಲ್ಲವೆಂದು ಅಭಿಪ್ರಾಯಪಟ್ಟನು. ಸಾಲಾರಜಂಗನ ಮಾತು ನಿಜವಾಯಿತು. ನಿಸಾಮನು ಕಲ್‌ಕತ್ತಾಕ್ಕೆ ಹೊರಡಲೇ ಬೇಕೆಂಬ ಮುಷ್ಕರವನ್ನು ಸಾಂಡರ್ಸನು ಬಿಡಬೇಕಾಗಿ ಬಂತು

ನಿಸಾಮು ಕಲ್‌ಕತ್ತೆಗೆ ಹೋಗುವ ವಿಚಾರ

ಕೂಡಲೇ ಈ ಸಾಂಡರ್ಸನು ಮಾಡಿದ ಅವಿವೇಕವನ್ನು ಕುರಿತು ಚರ್ಚೆ ಹುಟ್ಟಿ ಅವನನ್ನು ಇಂಡಿಯಾ ಸರ್ಕಾರದವರು ವಾಪಸು ಕರಿಸಿಕೊಂಡರು.

ಸಾಲಾರಜಂಗನಿಗೆ ರಾಜ್ಞಿಪುತ್ರನ ಭೇಟಿ.

ಸರ್ ಸಾಲಾರಜಂಗನಿಗೆ ಬೊಂಬಾಯಿಯಲ್ಲಿ ರಾಜ್ಞಿಪುತ್ರನ ಭೇಟಿಯಾಗಿ ವಿಶೇಷವಾದ ಮರ್ಯಾದೆ ಜರಗಿತು. ರಾಜ್ಞಿಪುತ್ರನೂ ಆತನ ಸಂಗಡ ಬಂದಿದ್ದ ಡ್ಯೂಕ್ ಸದರ್ಲೆಂಡು ಎಂಬಾತನೂ ಸರ್ ಸಾಲಾರ ಜಂಗನಿಗೆ ಔತನ ಕೊಟ್ಟು ಆತನು ಇಂಗ್ಲೆಂಡು ದೇಶಕ್ಕೆ ಬರಬೇಕೆಂದು ವಿಶೇಷವಾಗಿ ಬಲವಂತಮಾಡಿದರು. ತಾನು ಯೂರೋಪು ದೇಶಕ್ಕೆ ಹೋದರೆ ಅಲ್ಲಿ ತನ್ನನ್ನು ಮರ್ಯಾದೆಯಿಂದ ಕಂಡಾರೋ ಇಲ್ಲವೋ ಎಂಬ ಅನುಮಾನಕ್ಕೆ ವಿಶೇಷವಾಗಿ ಕಾರಣವಿರಲಿಲ್ಲ. ತನ್ನನ್ನು ಇಂಗ್ಲೆಂಡು ದೇಶಕ್ಕೆ ಬರಹೇಳಿ ಔತನ ಕೊಟ್ಟು ಕರೆದವರ ಮಾನಾನುಗುಣವಾಗಿಯೂ, ತನ್ನ ಮಾನಾನುಗುಣವಾಗಿಯೂ ಮರ್ಯಾದೆ ಜರಗಬಹುದೆಂದು ಸಾಲಾರಜಂಗನು ತಿಳಿದುಕೊಂಡಿದ್ದನು. ಇದೂ ಅಲ್ಲದೆ ಸಿಪಾಯಿಗಳ ದಂಗೆಯಲ್ಲಿ ತಾನು ಇಂಗ್ಲಿಷರಿಗೆ ಮಾಡಿದ ಸಹಾಯವನ್ನು ಯಾರೂ ಮರೆತಿರಲಾರರು. ಈ ವಿಧವಾದ ಧೈರ್ಯವೇನೋ ಇತ್ತು. ಆದರೆ ಈ ಮಹಾಮಂತ್ರಿಗೆ ನಿಜವಾಗಿ ಯೂರೋಪಿನಲ್ಲಿ ತೋರಿಸಲ್ಪಟ್ಟ ಮರ್ಯಾದೆಯು ಸಾಧಾರಣವಾದ್ದೆಂದು ಹೇಳಲು ಆಗಲಾರದು. ಒಬ್ಬ ಭಾರಿ ದೊರೆ ಮೆರವಣಿಗೆ ಹೊರಟಂತೆ ಇತ್ತು. ಪ್ರಖ್ಯಾತರಾದ ಯಾವ ಪುರುಷಶ್ರೇಷ್ಠನಿಗೂ ಯಾವ ದೊರೆಗೂ ಇಂಥಾ ಮರ್ಯಾದೆಯಾಗಲಿಲ್ಲ. ಇಂಡಿಯಾ ದೇಶದಲ್ಲಿ ಬ್ರಿಟಿಷ್ ಸರ್ಕಾರದ ನೌಕರರ ಅನುಚಿತವಾದ ನಡತೆಯಿಂದುಂಟಾದ ಕಿಂಕೃತಿಯನ್ನು. ಅನು

ಭವಿಸಿ ಸಾಕಾಗಿದ್ದ ಸಾಲಾರಜಂಗನಿಗೆ ಇದೆಲ್ಲವನ್ನೂ ನೋಡಿ ಆಶ್ಚರ್ಯವಾಗುವ ಹಾಗೆ ಮರ್ಯಾದೆ ನಡೆಯಿತು.

ಮಂತ್ರಿಯೂ ಘೋಸಿಗೆ ಹೊರಟದ್ದು.

ಈ ಮಂತ್ರಿಯು ೬೦ ಜನ ಪರಿವಾರದೊಡನೆ ೧೮೭೬ನೇ ಈಸವಿ ಏಪ್ರಿಲ್ ೮ನೇ ತಾರೀಖಿನಲ್ಲಿ ಬೊಂಬಾಯಿಯಲ್ಲಿ ಹಡಗನ್ನು ಏರಿ, ಮೇ ತಿಂಗಳು ೪ನೇ ತಾರೀಖಿನ ಸಾಯಂಕಾಲ ರೋಮ್ ಪಟ್ಟಣವನ್ನು ತಲಪಿದನು. ಮಾರನೇ ದಿವಸ ಬೆಳಗ್ಗೆ ಇಟಲಿ ದೇಶದ ದೊರೆಯು ಅರಮನೆಯಲ್ಲಿ ಸಾಲಾರಜಂಗನಿಗೆ ಭೇಟಿ ಕೊಟ್ಟು ಬಹಳ ಮರ್ಯಾದೆ ಮಾಡಿದನು. ಮೂರು ದಿವಸದ ತರುವಾಯ ಈತನಿಗೂ ಮತ್ತು ಪರಿವಾರಕ್ಕೂ ರೋಮನ್ ಕ್ಯಾತೊಲಿಕ್ ಮತದವರಿಗೆ ಮುಖ್ಯ ಗುರುವಾದ ಪೋಪನು ವ್ಯಾಟಿಕನ್ ಎಂಬ ತನ್ನ ಅರಮನೆಯಲ್ಲಿ ಭೇಟಿಯನ್ನು ಕೊಟ್ಟು, ಹೈದರಾಬಾದು ಸೀಮೆಯಲ್ಲಿ ಕ್ಯಾತೊಲಿಕ್ ಕ್ರಿಸ್ತ ಜನರಿಗೆ ಬೇಕಾದ ಅನುಕೂಲ್ಯಗಳನ್ನು ಕಲ್ಪಿಸಿ ಕೊಟ್ಟಿರುವುದಕ್ಕಾಗಿ ಸಾಲಾರಜಂಗನಿಗೆ ಕೃತಜ್ಞನಾಗಿದೇನೆಂದು ಹೇಳಿದನು.

ಇಟಲಿ ದೊರೆಯು ಮರ್ಯಾದೆ.

ಪೋಪನ ಮರ್ಯಾದೆ.

ಅದೇ ದಿವಸದಲ್ಲಿ ಎಲ್ಲರೂ ನೇಪಲ್ಸ್ ಎಂಬ ಪಟ್ಟಣಕ್ಕೆ ಬಂದರು. ಇದು ಬಹು ಸುಂದರವಾದ ಪಟ್ಟಣ, ಬಹಳ ಪ್ರಖ್ಯಾತವಾದ್ದು. "ಸಾಯುವುದಕ್ಕೆ ಮುಂಚೆ ಮನುಷ್ಯನು ಇದನ್ನು ನೋಡಬೇಕು" ಎಂಬದು ಬಂದು ಗಾಥೆ ಕೂಡ ಇದೆ. ಅಲ್ಲಿಗೆ ಪರಿವಾರದೊಡನೆ ಹೋಗಲು ಅಲ್ಲಿ ಬ್ರಿಟಿಷ್ ಅಧಿಕಾರಿಯೂ ಇಟಲಿ ದೇಶದ ನಾವಿಕ ಅಧಿಕಾರಿಯೂ, ಈ ವಜೀರನಿಗೆ ವಿಶೇಷವಾದ ಮರ್ಯಾದೆ ಮಾಡಿ ಕುಶಾಲ್ ಹಿಡಿ

ಕುಶಾಲ್ ತೋಪು ಹಾರಿಸಿದ್ದು.

ಗಿರಿಯನ್ನು ಹಾರಿಸಿದರು. ಅಲ್ಲಿಂದ ಫ್ರಾನ್ಸು ದೇಶದ ರಾಜಧಾನಿ ಯಾದ ಪ್ಯಾರಿಸ್ ಪಟ್ಟಣಕ್ಕೆ ಏಪ್ರಿಲ್ ೧೫ಕ್ಕೆ ತಲಪಿದರಾಗಿ, ಬಂದ ದಿನಸ ಸಾಯಂಕಾಲವೇ ಒಂದು ದೊಡ್ಡ ಹೋಟೇಲಿನ ಮಹಡಿ ಹಂತವನ್ನು ಇಳಿಯುತ್ತಾ ಇದ್ದುವಾಗ, ವಸೀರನು ಕಾಲು ಜಾರಿ ಕೆಳಕ್ಕೆ ಬಿದ್ದನು. ಒಂದು ಕಾಲಿಗೆ ಬಹಳ ಪೆಟ್ಟಾಯಿತು. ಈ ಯಾತನೆಯಿಂದ ಜೂನ್ ೧೫ನೇ ತಾರೀಖಿನವರೆಗೂ ಹಾಸಿಗೆಗೆ ಹತ್ತಿ ಮಲಗಿದ್ದನು. ತರುವಾಯ ಇಂಗ್ಲೆಂಡು ಸರ್ಕಾರದವರು ಈತನಿಗೋಸ್ಕರ ಮೊದಲೇ ಗೊತ್ತು ಮಾಡಿದ್ದ ಹಡಗಿನಲ್ಲಿ ಕೂತು ಇಂಗ್ಲಿಷ್ ಖಾರಿ ಎಂಬ ಸಮುದ್ರವನ್ನು ದಾಟಿ ಜೂನ್ ೩ನೇ ತಾರೀಖಿನಲ್ಲಿ ಆ ಮಂತ್ರಿಯು ಅವನ ಕಡೆ ಜನ ವಿಶಿಷ್ಟರೂ ಫೋಕಸ್ಟನ್ ಎಂಬ ಸ್ಥಳವನ್ನು ತಲಪಿದರು. ಡ್ಯೂಕ್ ಸದರ್ಲೆಂಡನು ಅಲ್ಲಿ ಎದುರುಗೊಂಡು ಮರ್ಯಾದೆ ಮಾಡಿದನು. ಅಲ್ಲಿ ಮೇಯರೆಂಬ ಮುಖಂಡ ಪುರವಾಸಿಯು ಎದುರುಗೊಂಡು ಸ್ವಾಗತಸೂಚಕವಾದ ವಿಜ್ಞಾಪನಾ ಪತ್ರಿಕೆಯನ್ನು ಕೊಟ್ಟನು. ತರುವಾಯ ಅದೇ ದಿನ ರಾತ್ರೆ ಡ್ಯೂಕು ಸದರ್ಲ್ಯಾಂಡನ ಉಪ್ಪರಿಗೆಯಲ್ಲಿ ಆ ವಸೀರನನ್ನೂ ಪರಿವಾರವನ್ನೂ ಇಳಿಸಿದರು. ಅಲ್ಲಿಗೆ ಬಂದು ಇಳಿದಾಗಿನಿಂದ ಆ ಸ್ಥಳಬಿಟ್ಟು ಹೊರಟುಹೋಗುವ ತನಕ ಸಾಲಾರಜಂಗನಿಗೆ ಒಂದು ಗಂಟೆ ಕೂಡ ವ್ಯವಧಾನ ದೊರೆಯಲಿಲ್ಲ. ಔತಣದ ಮೇಲೆ ಔತಣ, ವಿಜ್ಞಾಪನಪತ್ರಿಕೆಯ ಮೇಲೆ ವಿಜ್ಞಾಪನಾಪತ್ರಿಕೆ, ಮನ್ನಣೆಯ ಮೇಲೆ ಮನ್ನಣೆ, ಇದೆಲ್ಲಾ ಸಾಕ್ಕು ಚಿಕ್ಕಸೇರಿದ ಮಳೆಯು ಹಾಗೆ ಸುರಿದವು. ಸಾಲಾರಜಂಗನ

ಪ್ಯಾರಿಸ್‌ನಲ್ಲಿ ಅಪಾಯವಾದದ್ದು.

ಇಂಗ್ಲೆಂಡಿಗೆ ಬಂದದ್ದು.

ಇಂಗ್ಲೆಂಡಿನಲ್ಲಿ ಅದ್ಭುತ ಮರ್ಯಾದೆಗಳು.

ಜರ್ಸ ೨೦ರಲ್ಲಿ ರಾಜ್ಞಿಕುಮಾರ ಮತ್ತು ಆತನ ಕುಟುಂಬ ಇವರೊಡನೆ ಭೋಜನ ಮಾಡಿದನು. ಜೂಲೈ ಗುರ್ರೆತಾರೀಖಿನಲ್ಲಿ ಸಾಲಿಸ್‌ಬರಿ ಪ್ರಭುವು ಸಾಲಾರಜಂಗನಿಗೆ ವಿಕ್ಟೋರಿಯ ರಾಣಿಯ ಭೇಟಿ ಮಾಡಿಸಿದನು. ಆದಿನ ಸಾಯಂಕಾಲ ರಾಣಿಯ ಪಜ್ತ್ರೆಯಲ್ಲಿ ಊಟವಾಯಿತು. ಜೂಲೈ ತಿಂಗಳು ೫ನೇ ತಾರೀಖಿನಲ್ಲಿ ಇಂಡಿಯಾದೇಶಕ್ಕೆ ಮಂತ್ರಿಯಾಗಿದ್ದ ಸಾಲಿಸ್‌ಬರಿ ಪ್ರಭುವಿನ ಮನೆಯಲ್ಲಿ ಔತನವಾಯಿತು. ಜೂಲೈ ೬ನೇ ತಾರೀಖಿನಲ್ಲಿ ಪ್ರಿನ್ಸ್ ಆಫ್ ವೆಲ್ಸನಿಗಾಗಿ ಸಾಲಾರಜಂಗನು ಔತನ ಮಾಡಿಸಿದನು. ಅದೇ ಜೂಲೈ ೧೫ನೇ ತಾರೀಖಿನಲ್ಲಿ ಸ್ಕಾಟಲೆಂಡಿನಲ್ಲಿ ಬಹುಮಂದಿ ಸೇರಿ ಅನೇಕ ವಿಜ್ಞಾಪನಾ ಪತ್ರಿಕೆಗಳನ್ನು ಓದಿದರು. ಆಕ್ಸಫರ್ಡು ಕಲಾಶಾಲೆಯಲ್ಲಿ ಸರ್‌ಸಾಲಾರಜಂಗನಿಗೆ ಡಿ. ಸಿ. ಎಲ್., ಎಂಬ ಗೌರವವಾದ ಪಾಂಡಿತ್ಯದ ಬಿರುದನ್ನು ಕೊಟ್ಟರು. ಮಾರನೇ ದಿವಸ ಲಂಡನ್ ಪಟ್ಟಣದ ಪುರವಾಸಿ ಎಂಬ ಒಂದು ಬಿರದಿನ ಜಯರೇಖೆಯನ್ನೂ ವಿಚಿತ್ರವಾಗಿ ನಕಾಸು ಮಾಡಿರುವ ಚಿನ್ನದ ಪೆಟ್ಟಿಗೆಯನ್ನೂ ಆತನಿಗೆ ನಸರ್ ಮಾಡಿದರು. ೨೬ನೇ ತಾರೀಖಿನಲ್ಲಿ ಮಾಂಚೆಸ್ಟರ್ ಪಟ್ಟಣದ ಮ್ಯುನಿಸಿಪಾಲಟಿಯವರೂ, ವ್ಯಾಪಾರಸಂಘದವರೂ ಕಾದುಕೊಂಡಿದ್ದು ವಸೀರನಿಗೆ ವಿಜ್ಞಾಪನಾ ಪತ್ರಿಕೆಗಳನ್ನು ಓದಿದ್ದಲ್ಲದೆ ತಮ್ಮ ಸ್ಥಳಕ್ಕೆ ಸಾಲಾರಜಂಗನು ಸವಾರಿ ಬರಲು ಅನುಕೂಲವಿಲ್ಲದ್ದಕ್ಕಾಗಿ ವ್ಯಸನವನ್ನು ಸೂಚಿಸಿದರು. ಇದೂ

ರಾಜ್ಞಿಕುಮಾರನಲ್ಲಿ ಊಟ.

ರಾಣೀ ಭೇಟಿ, ಭೋಜನ.

ರಾಜ್ಞಿಕುಮಾರನಿಗೆ ಸಾಲಾರ ಜಂಗು ಕೊಟ್ಟ ಔತನ.

ವಿಜ್ಞಾಪನಾಪತ್ರಿಕೆಗಳು.

ಡಿ. ಸಿ. ಎಲ್.. ಬಿರದು.

ಅಲ್ಲದೆ ಲರ್ಡ್‌ಟೈಂಸು ಮೊದಲಾದ ವಿಶಿಷ್ಟವರ್ತಮಾನ ಪತ್ರಿಕೆಯವರೂ ಸಾಲಾರಜಂಗನ ಯೋಗ್ಯತೆಯನ್ನೂ, ಆತನ ರಾಜ್ಯಭಾರದ ವಿರ್ಹಾಡುಗಳನ್ನೂ, ಆತನ ವಿನಯ ಸಂಪತ್ತನ್ನೂ, ಮತ್ತು ನಾನಾರಾಯನ ದಂಗೆಯಲ್ಲಿ ಆತನು ಇಂಗ್ಲಿಷರಿಗೆ ಮಾಡಿದ ಮಹೋಪಕಾರವನ್ನೂ ಕುರಿತು, ತಮ್ಮ ದೇಶದಲ್ಲಿ ಆ ಮಂತ್ರಿ ಇರುವ ತನಕ ಒಂದು ದಿನವೂ ಬಿಡದೆ ಸ್ತೋತ್ರಮಾಡಿದರು.

ತಿರುಗುಪ್ರೈಣ. ತರುವಾಯ ಸರ್ ೧೮೭೬ನೇ ಈಸವಿ ಜುಲೈ ೩೧ನೇ ತಾರೀಖಿನಲ್ಲಿ ಸಾಲಾರಜಂಗನು ಇವನ ಪರಿವಾರದವರೊಡನೆ ಇಂಡಿಯಾದೇಶಕ್ಕೆ ಹಿಂತಿರುಗಿ ಪ್ರಯಾಣಮಾಡಿದನು. ಇಂಗ್ಲಿಷ್‌ಜನರು ತೋರಿಸಿದ ಮರ್‍ಯಾದೆಯೂ, ಅವರ ಸೌಜನ್ಯವೂ, ಇಂಗ್ಲಿಷ್ ಸರ್ಕಾರದವರ ಮಹಾಪದವಿಯೂ, ಇದೆಲ್ಲಾ ಸಾಲಾರಜಂಗನ ಮನಸ್ಸಿನಮೇಲೆ ನಾಟಹೋಯಿತು. ಇದನ್ನು ಈತನು ಎಂದಿಗೂ ಮರೆಯಲಿಲ್ಲ. ಬೀರಾರಿನ ವಿಷಯದಲ್ಲಿ ಕಲ್‌ಕತ್ತಾ ಸರ್ಕಾರದವರು ನಡಿಸಿದ ಕುಕ್ಕುಮುಳ್ಳಿನ ರಾಜನೀತಿ ಕೂಡ ಈ ಮಸೀರನಿಗೆ ಇಂಗ್ಲಿಷ್‌ಜನರ ವಿಚಾರದಲ್ಲಿ ಹುಟ್ಟಿದ್ದ ಒಳ್ಳೇ ಅಭಿಪ್ರಾಯವನ್ನು ಹೋಗಲಾಡಿಸಲಾರದೇ ಹೋಯಿತು. ಬರುತಾ ದಾರಿಯಲ್ಲಿ ಪಾರಿಸ್ ಪಟ್ಟಣವನ್ನು ಸೇರಿ ಅಲ್ಲಿ ಎರಡು ದಿವಸ ಇದ್ದು ಆ ಪಟ್ಟಣದ ವೈಖರಿಯನ್ನೂ, ಅಲ್ಲಿನ ರಾಜ್ಯಭಾರದ ಸಭೆಯನ್ನೂ ನೋಡಿಕೊಂಡು, ಇಟಲಿಯಲ್ಲಿರುವ ಮಿಲಾರ್ನ ಪಟ್ಟಣಕ್ಕೆ ಆಗಸ್ಟು ಗುರ್ರ್ರೇತಾರೀಖಿನಲ್ಲಿ ಹೊರಟು ಅಲ್ಲಿ ಒಂದು ದಿವಸ ಇದ್ದು, ಅಲ್ಲಿಂದ ಬ್ರಿಂಡಿಸಿಗೆ ಬಂದು ಹಡಗ ಹತ್ತಿ ೧೮೭೬ನೇ ಈಸವಿ ಆಗಸ್ಟು ೨೪ರಲ್ಲಿ ಬೊಂಬಾಯಿಗೆ ಬಂದು, ೨೬ನೇ ತಾರೀಖು ಹಗಲು ೯ ಗಂಟೆಯಲ್ಲಿ ಹೈದರಾಬಾದನ್ನು ಸೇರಿದ ಕೂಡಲೆ ಜನರೆಲ್ಲರೂ ಅತ್ಯಂತವಾಗಿ ಸಂತೋಷಭರಿತರಾದರು.

# ೮ನೇ ಅಧ್ಯಾಯು.

## ಸಾಲಾರಜಂಗನಿಗೂ ರೆಸಿಡೆಂಟಿಗೂ ವಿರೋಧ ಬಂದದ್ದು.

ಅಮೀರಿ ಕಬೀರ್ ಸತ್ತದ್ದು

ಸಾಲಾರಜಂಗನು ಯೂರೋಪು ದೇಶಗಳಿಂದ ವಾಪಸುಬಂದ ತರುವಾಯ ಸುಮಾರು ಎಂಟು ತಿಂಗಳಮೇಲೆ ೧೮೭೭ನೇ ಈಸವಿ ಏಪ್ರಿಲ್ ತಿಂಗಳಲ್ಲಿ ರಾಜ್ಯ ಭಾರಕ್ಕೆ ಸಾಲಾರಜಂಗನ ಜೊತೆಗೆ ಸೇರಿಕೊಂಡಿದ್ದ ಅಮೀರಿ ಕಬೀರೆಂಬ ಸರದಾರನು ಬಹುದಿವಸದಿಂದ ಅಲಸ್ಯವಾಗಿ ಮಲಗಿದ್ದು ತೀರಿಹೋದನು. ಈತನು ನಿಸಾಮನಿಗೂ ಬ್ರಿಟಿಷ್ ಸರ್ಕಾರದವರಿಗೂ ಬೇಕಾದವನಾಗಿರುತಿದ್ದಾಗ್ಯೂ ಸರ್ಕಾರಿ ಆಡಳತ ಈತನಿಗೆ ವಿಶೇಷವಾಗಿ ತಿಳಿಯುತಿರಲಿಲ್ಲ. ಅದೆಲ್ಲವನ್ನೂ ಸಾಲಾರಜಂಗನೇ ನೋಡಿಕೊಳ್ಳುತಾ ಇದ್ದನು. ಇವನ ಮರಣಾನಂತರ ಇವನ ಸ್ಥಾನಕ್ಕೆ ಯಾರನ್ನು ನೇಮಿಸಬೇಕೆಂಬ ವಿಚಾರ ಬಂತು. ರಾಜ್ಯಭಾರದ ಕೆಲಸಕ್ಕೆ ತನ್ನ ಜೊತೆಗೆ ಯಾರೂ ಅಗತ್ಯವಿಲ್ಲವೆಂದು ಸಾಲಾರಜಂಗನು ಅಭಿಪ್ರಾಯಪಟ್ಟನು. ಈ ವಿಚಾರವು ಕಲ್‌ಕತ್ತಾ ಸರ್ಕಾರಕ್ಕೆ ವರದಿಯಾಗಲು ವಸೀರನ ಜೊತೆಗೆ ಇನ್ನೊಬ್ಬ ಸರಿಯಾದ ಸರದಾರ ಇದ್ದೇ ತೀರಬೇಕೆಂದು ವೈಸರಾಯಿಯು ನಿಷ್ಕರ್ಷೆ ಮಾಡಿದನು.

ವಿಕಾರುಲ್‌ಉಂರ

ಈ ಉದ್ಯೋಗಕ್ಕೆ ನವಾಬ ವಿಕಾರುಲ್ ಉಂರ ಹೊರತ್ತು ಮತ್ತೆ ಯಾರೂ ಲಾಯಖಾದವರು ಇರಲಿಲ್ಲ. ಈತನು ಅಮೀರಿ ಕಬೀರನಿಗೆ ತಮ್ಮ. ನಿಸಾಂ ಅಫಸಲ್ ಉದ್ದೌಲನ ತಂಗಿಯ ಗಂಡ. ಈತನ ಇಬ್ಬರು ಗಂಡು ಮಕ್ಕಳಿಗೂ ನಿಸಾಂ ಮೀರ್‌ಹಬೀಬಖಾನನ ತಂಗಿಯರನ್ನು ಕೊಟ್ಟು

ಮದುವೆಯಾಗಿತ್ತು. ಈತನನ್ನು ಖಾಲಿ ಇರುವ ಕೆಲಸಕ್ಕೆ ನೇಮಿಸಬೇಕೆಂದು ಇಂಗ್ಲಿಷ್ ಸರ್ಕಾರದವರು ಪಟ್ಟು ಹಿಡಿದರು. ಸಾಲಾರಜಂಗನು—"ಆತನಿಗೂ ತನಗೂ ವೈಷಮ್ಯವಿದೆ" ಎಂತಲೂ, ಆತನನ್ನು ತನ್ನ ಜೊತೆಗೆ ನೇಮಿಸಕೂಡದೆಂತಲೂ, ಬಲವಾಗಿ ಹೇಳಿದನು. ಇಂಡಿಯಾ ಸರ್ಕಾರದವರು ಕೇಳಲಿಲ್ಲ. ರಾಜಪ್ರತಿನಿಧಿ ಸಭೆಗೆ ಆತನನ್ನು ನೇಮಿಸಿದರು. ತಾವು ಹೀಗೆ ಮಾಡಿದರೆ ಸಾಲಾರಜಂಗನು ತನ್ನ ಕೆಲಸಕ್ಕೆ ರಾಜೀನಾಮೆ ಕೊಡಬಹುದೆಂದು ಇಂಗ್ಲಿಷರು ತಿಳಿದಿದ್ದರು. ಆದರೆ ಆ ಮಂತ್ರಿಯು ದೂರವಾಗಿ ಆಲೋಚನೆ ಮಾಡಿ, ರಾಜೀನಾಮೆ ಕೊಡದೆ ಸುಮ್ಮನಿದ್ದನು. ರಾಜ್ಯವನ್ನೆಲ್ಲಾ ಹತೋಟಿಗೆ ತಂದು ಸರಿಯಾದ ಸ್ಥಿತಿಯಲ್ಲಿ ನಿಸಾಮನಿಗೆ ಒಪ್ಪಿಸುವುದಕ್ಕೆ ಮುಂಚೆ ಮಂತ್ರಿ ಕೈಬಿಟ್ಟನಲ್ಲಾ ಮಹಾ ರಾಜಕಾರ್ಯಗಳೆಲ್ಲವನ್ನೂ ನಿರ್ವಹಿಸಿದ ಶಕ್ತನು ದೊರೆಯ ಬಾಲ್ಯಾವಸ್ಥೆಯಲ್ಲಿ ಕೈಬಿಟ್ಟರೆ ಎಲ್ಲವೂ ಕೆಟ್ಟುಹೋಗುವುದಲ್ಲಾ, ಎಂಬ ಅಸಮಾಧಾನವನ್ನೂ, ಅಪವಾದವನ್ನೂ, ತಪ್ಪಿಸಿಕೊಳ್ಳುವುದಕ್ಕಾಗಿ ಇಂಗ್ಲಿಷ್ ಸರ್ಕಾರದವರ ಏರ್ಪಾಡಿಗೆ ಒಪ್ಪಿಕೊಳ್ಳಬೇಕಾಗಿ ಬಂತು. ಆದರೆ ರೆಸಿಡೆಂಟು ಮೀಡು ಸಾಹೇಬನು ಮಂತ್ರಿಯ ವಿತರಣೆಯಲ್ಲಿ ಕೇವಲ ನಂಬಿಕೆಯನ್ನು ಇಟ್ಟುಕೊಂಡಿರುವುದಾಗಿ ಸೂಚಿಸಿರುವ ಒಂದು ಕಾಗದದ ಆಧಾರದ ಮೇಲೆ ವಸೀರನು ಧೈರ್ಯವಾಗಿ ಅಮೀರಿಕಬೀರ್ ಷಂಷುಲ್‌ಉಂರ ಎಂಬ ಬಿರುದನ್ನು ವಿಕಾರುಲ್ ಉಂರನಿಗೆ ಕೊಟ್ಟು, ಪೂರ್ವದಲ್ಲಿ ರಾಜ್ಯಭಾರಕ್ಕೆ ತನ್ನ ಜೊತೆಗಾರನಾಗಿದ್ದ ಅಮೀರಿ ಕಬೀರನ ಆಗತೆಗಳನ್ನು ಇತರರಿಗೆ ಕೊಟ್ಟನು. ಈ ಏರ್ಪಾಡು ರೆಸಿಡೆಂಟು ಮೀಡುಸಾಹೇಬ

ವಿಕಾರುಲ್ ಉಂರನಿಗೆ ಬಿರುದು.

ನಿಗೂ, ಕಲ್‌ಕತ್ತಾ ಸರ್ಕಾರದವರಿಗೂ, ವಸೀರನಲ್ಲಿದ್ದ ಅಸಮಾ ಧಾನವನ್ನು ಮತ್ತೂ ಹೆಚ್ಚುಮಾಡಿತು.

ರೇಲ್ವೆ ಸಾಲ.

ಹೀಗೆ ಹೆಚ್ಚಾದ ಆಗ್ರಹಶಿಖಿಗೆ ಇನ್ನೊಂದು ಆಜ್ಯಬಂದು ಸೇರಿತು. ಇಂಗ್ಲೆಂಡು ದೇಶಕ್ಕೆ ಸಾಲಾರಜಂಗನು ಪ್ರಯಾಣಮಾಡಿ ಹೊರಡುವುದಕ್ಕೆ ಮುಂಚೆ ಲಂಡರ್ನ ಪಟ್ಟಣದಲ್ಲಿ ಹತ್ತು ಲಕ್ಷ ಪೌನು ಸಾಲಾ ತೆಗೆದುಕೊಳ್ಳಲು ಸಂಧಾನವನ್ನು ನಡಿಸುತಿದ್ದನೆಂದು ೧೮೭೬ನೇ ಈಸವಿ ಏಪ್ರಿಲ್ ತಿಂಗಳಲ್ಲಿ ರೆಸಿಡೆಂಟು ಮೀಡ್ ಸಾಹೇಬನಿಗೆ ತಿಳಿಯಬಂತು. ಈ ಸಾಲವು ಹೈದರಾಬಾದಿಗೆ ರೈಲ್ ರಸ್ತೆ ಹಾಕಿಸುವುದಕ್ಕಾಗಿ ಎಂದು ಗೊತ್ತಾಗಿತ್ತು. ಇಂಥಾ ಯಾವ ಸಾಲವನ್ನು ಯೂರೋಪಿಯರ್ನ ಜನರಲ್ಲಿ ಮಾಡಬೇಕಾದರೂ ಇಂಡಿಯ ಮಂತ್ರಿಯು ಮತ್ತು ವೈಸ ರಾಯಿಯವರ ಅಪ್ಪಣೆ ಅಗತ್ಯವೆಂದು ಹಿಂದಕ್ಕೆ ಇಂಗ್ಲಿಷ್ ಸರ್ಕಾ ರದವರು ಒಂದು ಕಾನೂನನ್ನು ಮಾಡಿಕೊಂಡಿದ್ದರು. ಈ ಸಾಲ ಅಂಥಾದ್ದಲ್ಲ. ಹೈದರಾಬಾದಿನಲ್ಲಿರುವ ಕೆಲವು ಸಾಹುಕಾರರು ಈ ಸಾಲವನ್ನು ತೆಗೆದುಕೊಳ್ಳುವುದೆಂತಲೂ, ಆ ಸಾಹುಕಾರರಿಗೆ ಸಾಲಾ ರಜಂಗನು ಹೊಣೆಮಾಡಿಕೊಡುವುದೆಂತಲೂ, ನಿಷ್ಕರ್ಷೆಯಾಗಿತ್ತು. ರೆಸಿಡೆಂಟನು ಇಂಥಾ ಸಾಲಮಾಡಲು ಇಂಡಿಯಾ ಸರ್ಕಾರದವರ ಅನುಮತಿಯನ್ನು ಪಡೆಯಬೇಕೆಂದೂ, ಅದಕ್ಕೆ ಮುಂಚೆ ಸಾಲಾ ಮಾಡಕೂಡದೆಂದೂ ತಿಳಿಸಲು, ಅದಕ್ಕೆ ಮಂತ್ರಿಯು ಒಪ್ಪಿಕೊಂ ಡನು. ಇಂಗ್ಲೆಂಡಿನಿಂದ ಸಾಲಾರಜಂಗನು ಬಂದಮೇಲೆ ಈ ವಿಚಾರದಲ್ಲಿ ಇಂಡಿಯಾ ಸರ್ಕಾರದವರಿಗೂ ಆತನಿಗೂ ಚರ್ಚೆ ಜರ ಗಿತು. ವಸೀರನು ಮಾಡಿದ್ದ ಏರ್ಪಾಡಿಗಿಂತಲೂ ಸುಲಭವಾದ ಬಡ್ಡಿಗೆ ಇಂಡಿಯಾ ಸರ್ಕಾರದವರು ಹಣವನ್ನು ಸಾಲಾ ಕೊಡ ಬೇಕು, ಅಥವಾ ಖರ್ಚಾದ ಹಣಕ್ಕೆ ಸುಲಭವಾದ ಬಡ್ಡಿಯನ್ನು

ಹೈದರಾಬಾದಿನವರು ಕೊಡಬೇಕು. ಈ ಷರತ್ತಿನಮೇಲೆ ಬ್ರಿಟಿಷ್ ಸರ್ಕಾರದವರು ರೈಲ್ ಹಾಕಿಸಿಕೊಡುವುದಾಗಿಯೂ, ಅಂಥಾ ರೈಲು ವಿಶಿಷ್ಟವೂ ಹೈದರಾಬಾದು ಸರ್ಕಾರಕ್ಕೆ ಸೇರತಕ್ಕದ್ದೆಂತಲೂ ಸಲಹೆ ಬಂತು. ಇದಕ್ಕೆ ಸಾಲಾರಜಂಗನು ಒಪ್ಪಲಿಲ್ಲ. ಕಡೆಗೆ ಇಂಡಿಯಾ ದೇಶದ ಮಂತ್ರಿಯು ಈ ಸಾಲವನ್ನು ಲಂಡನ್ ಪಟ್ಟಣದಲ್ಲಿ ನಿಸಾಂ ಸರ್ಕಾರದವರು ಮಾಡಬಹುದೆಂದು ಅನುಮತಿ ಕೊಟ್ಟನು. ಅದರಂತೆ ಹೈದರಾಬಾದಿಗೆ ರೈಲ್ವೆ ಹಾಕಲ್ಪಟ್ಟಿತು.

ಬೀರಾರ್ ವಿಚಾರದಲ್ಲಿ ಹೊಸ ಕರೀತ.

ತರುವಾಯ ಸರ್ ೧೮೭೭ನೇ ಈಸವಿ ಮೇ ತಿಂಗಳಲ್ಲಿ ಬೀರಾರ್ ದೇಶವನ್ನು ನಿಸಾಂ ಸರ್ಕಾರಕ್ಕೆ ವಾಪಸು ಬಿಟ್ಟುಕೊಡಬೇಕೆಂಬ ವಿಚಾರದಲ್ಲಿ ಮಂತ್ರಿಯು ಎರಡನೇ ಸಾರಿ ಇನ್ನೊಂದು ಲೇಖನವನ್ನು ಬರೆದು ವೈಸರಾಯಿಗೆ ರವಾನಿಸಿದನು. ಇದರಲ್ಲಿ ಪೂರ್ವದ ಲೇಖನದಲ್ಲಿದ್ದ ಕಠಿಣೋಕ್ತಿಗಳಿರಲಿಲ್ಲ. ಇದು ಆಲೋಚನೆಗೆ ಬಂದು ನಿಸಾಮನಿಗೆ ವಯಸ್ಸು ಬರುವ ತನಕ ಯೋಚಿಸಲಾಗದೆಂದು ವೈಸರಾಯಿ ಲಿಟ್ಟನ್ ಹೇಳಿಬಿಟ್ಟನು. ಈ ಮಧ್ಯೆ ೧೮೮೩ನೇ ಈಸವಿ ಫೆಬ್ರವರಿ ೮ರಲ್ಲಿ ವಿಷೂಚಿಯಿಂದ ಈ ಮಹಾ ಮಂತ್ರಿ ಮೃತನಾದನು.



# ೯ನೇ ಅಧ್ಯಾಯು.

## ರಾಜ್ಯಭಾರದ ಹೊಸ ಏರ್ಪಾಡುಗಳು.

ರಾಜ್ಯಭಾರದ ಹಳೇ ಏರ್ಪಾಡು

ಸ್ವಾಮಿಭಕ್ತಿ, ಕೃತಜ್ಞತೆ, ದೇಶಾಭಿಮಾನ, ಪ್ರಾಮಾಣಿಕತೆ, ಸೌಲಭ್ಯ, ನಿರಹಂಕಾರ, ದೂರದೃಷ್ಟಿ, ನಿಸರ್ಗವಾದ ಸೌಜನ್ಯ ಇವುಗಳೇ ಮೊದಲಾದ ಸಹಜವಾದ ಸುಗುಣಗಳ ಜೊತೆಗೆ ಈ ಮಂತ್ರಿಶ್ರೇಷ್ಠನು ರಾಜ್ಯಭಾರಕ್ರಮದಲ್ಲಿ ಮಾಡಿದ ಹೊಸ ಏರ್ಪಾಡು ಆತನ ಶಾಶ್ವಿತವಾದ ಕೀರ್ತಿಗೆ ಆಧಾರವಾಯಿತು. ಆದರೆ ಮೊದಲಿದ್ದ ಸ್ಥಿತಿ ತಿಳಿಯದೇ ಹೋದರೆ ಹೊಸ ಕ್ರಮಗಳ ಫಲಿತಾಂಶವು ತಿಳಿಯುವುದಿಲ್ಲವಾಗಿ, ಈ ಮಂತ್ರಿಯು ಕಾಲಕ್ಕೆ ಹಿಂದೆ ಇದ್ದ ರಾಜ್ಯಭಾರದ ರೀತಿಯನ್ನು ವಿವರಿಸತಕ್ಕದ್ದು ಅಗತ್ಯವಾಗಿದೆ.

ರೆವಿನ್ಯೂ ಯಾ ಮುಲ್ಕಿ ಬಾಬು.

ಸಾಲಾರಜಂಗನ ಕಾಲಕ್ಕೆ ಮುಂಚೆ ಕಂದಾಯವನ್ನು ವಸೂಲ್ ಮಾಡಲು ಜನಗಳಿಗೆ ಗುತ್ತಿಗೆಗೆ ಕೊಡುತಿದ್ದರು. ಒಬ್ಬೊಬ್ಬ ಗುತ್ತಿಗೇದಾರನಿಗೆ ಒಂದೊಂದು ಪ್ರದೇಶವನ್ನು ಗೊತ್ತು ಮಾಡಿ ಹರಾಜು ಮಾಡಿಸಿ ಒಂದು ಕ್ಲಿಪ್ತವಾದ ಕಾಲಕ್ಕೆ ಕೊಡುತಿದ್ದರು. ಈ ಗುತ್ತಿಗೆದಾರರಿಗೆ ತಾಲ್ಲೋಕುದಾರರೆಂದೂ ಹೆಸರು. ಈ ತಾಲ್ಲೋಕುದಾರರು ವಸೂಲ್ಮಾಡಿದ ಹಣದಮೇಲೆ ರೂಪಾಯಿಗೆ ನಾಲ್ಕಾಣೆ, ಎರಡಾಣೆ ಈ ಪ್ರಕಾರ ಸರ್ಕಾರದವರು ವಟ್ಟ ಕೊಡುತಿದ್ದರು. ದ್ರವ್ಯಸಂಪಾದನೆಯೇ ಈ ಗುತ್ತಿಗೇದಾರರ ಮುಖ್ಯವಾದ ಕೋರಿಕೆಯಾದ್ದರಿಂದ ಲೈಲಾಂನಲ್ಲಿ ಮನಸ್ಸು ಬಂದಹಾಗೆ ಹಣವನ್ನು ಹೆಚ್ಚಿಸಿ ತೆಗೆದುಕೊಂಡು ಹೆಚ್ಚು ಹಣವನ್ನು ಸಂಪಾದನೆ ಮಾಡುವ ಮಾರ್ಗವನ್ನೇ ನೋಡುತಿದ್ದರು. ಈ ಗುತ್ತಿಗೇದಾರರು ಅಷ್ಟು

ಬುದ್ಧಿಶಾಲಿಗಳೂ ಅಲ್ಲ, ಅಷ್ಟು ದಯಾರಸ ಉಳ್ಳವರೂ ಅಲ್ಲ. ಆದರೆ ಸ್ವಪ್ರಯೋಜನವನ್ನು ನೋಡಿಕೊಳ್ಳುವುದರಲ್ಲಿ ಮಾತ್ರ ನಿಸ್ಸೀಮರು. ಯಾವ ರೈತರಿಗೆ ಯಾವ ಜನರಿಗೆ ಎಷ್ಟು ಹಿಂಸೆಯಾಗಲಿ, ಇವರಿಗೆ ಅದು ಲಕ್ಷ್ಯವಿಲ್ಲ; ತಮ್ಮ ಜೋಳಿಗೆ ತುಂಬುವುದೆಷ್ಟೋ ಅಷ್ಟೇ ಮುಖ್ಯವಾದ್ದು. ಹೀಗಾದ್ದರಿಂದ ಈ ತಾಲ್ಲೋಕುದಾರರು ಬಡರೈತರಿಂದ ಒಂದಕ್ಕೆ ನಾಲ್ಕರಷ್ಟು ವಸೂಲ್ಮಾಡಿದರೂ ಒಂದು ಸಾರಿಗೆ ನಾಲ್ಕು ಸಾರಿ ವಸೂಲ್ಮಾಡಿದರೂ ಕೇಳುವವರೇ ಇರಲಿಲ್ಲ. ಈ ತಾಲ್ಲೋಕುದಾರರ ಮೇಲೆ ಯಾವ ಫಿರ್ಯಾದು ಬಂದರೂ ಸರ್ಕಾರದವರು ಲಾಲಿಸುತಿರಲಿಲ್ಲ. ಸರ್ಕಾರದ ಗುತ್ತಿಗೇ ಹಣವನ್ನು ಇವರು ಕೊಟ್ಟು ಬಿಟ್ಟರೆ ಸಾಕು, ಗುತ್ತಾದಾರರು ಇನ್ನು ಎಷ್ಟು ಹೆಚ್ಚಾಗಿ ವಸೂಲ್ಮಾಡಿಕೊಂಡರೂ ವಿಚಾರಿಸುತಿರಲಿಲ್ಲ. ಇದರಿಂದ ಸರ್ಕಾರದ ಲೆಕ್ಕಪತ್ರಗಳಲ್ಲಿ ತಪ್ಪುಗಳೂ ಗಲಭೆಗಳೂ ಹುಟ್ಟಿ ಲೆಕ್ಕವೇ ಸಿಕ್ಕದ ಹಾಗೆ ಇತ್ತು. ಇತ್ತ ರೈತರಿಗೆ ಹಿಂಸೆ, ಅತ್ತ ಸರ್ಕಾರಕ್ಕೆ ಮೋಸ, ಇವೆರಡೂ ಉಂಟಾಗುತಿದ್ದವು. ದಿವಾನರು ಮತ್ತು ಪೇಷ್ಕಾರರು ಇವರುಗಳ ಕೈಕೆಳಗೆ ಲೆಕ್ಕವನ್ನು ಇಟ್ಟು ಕೆಲಸ ಮಾಡುತಾ ಇದ್ದ ದಫ್ತರದಾರರು ತಮಗೆ ಬೇಕಾದವರಿಗೆ ಕಂದಾಯ ವಸೂಲ್ಮಾಡಲು ಗುತ್ತಿಗೆಗೆ ಕೊಡುತಿದ್ದರು.

ದಫ್ತರದ ಲೆಕ್ಕ

ಈ ಇಲಾಖೆಯಲ್ಲಿ ಜಮಾ ಆಗಿ ಬಂದ ಹಣಕ್ಕೆ ಮಾತ್ರ ಹಳೇ ತರಹದಲ್ಲಿ ಲೆಕ್ಕವನ್ನು ಇಟ್ಟದ್ದರು, ಅದೂ ಸರಿಯಾಗಿಲ್ಲ. ಖರ್ಚುಬಾಬಿಗೆ ಲೆಕ್ಕವೇ ಇಲ್ಲ. ಸಾಲಾರಜಂಗನು ಮಂತ್ರಿಯ ಕೆಲಸಕ್ಕೆ ನೇಮಕವಾದಾಗ ರಾಜ್ಯದ ಆಯಾ ಗಡಿಗಳಲ್ಲಿದ್ದ ದಂಡಿನವರಿಗೆ ಸಂಬಳ ಕೊಟ್ಟಮೇಲೆ ೧೮ ಲಕ್ಷ ರೂಪಾಯಿ ಮಾತ್ರ ಸರ್ಕಾರದ ಬಾಕಿ ಖರ್ಚಿಗೆಲ್ಲಾ ಉಳಿ

ಯುತಿತ್ತು. ಆದರೆ ನಿಸಾಮನ ಸಂಬಂಧಿಗಳಿಗೆ ಖರ್ಚಿಗೆ ಕೊಡ ತಕ್ಕ ಹಣ, ಪಠಾಣರ ಸಂಬಳ, ಮತ್ತು ಇತರ ಚಿಲ್ಲರೆ ದಂಡಿನ ವರ ಸಂಬಳ ಸಹಾ ಸೇರಿ ೧೮ ಲಕ್ಷಕ್ಕಿಂತಲೂ ಹೆಚ್ಚಾಗುತಿತ್ತು.

ಖಜಾನೆ.

ಹುಜೂರು ಖಜಾನೆ ಎಂತ ಬೇರೆ ಇರಲೇ ಇಲ್ಲ. ಸರ್ಕಾರ ದವರ ನಾಣ್ಯ ಬಹಳ ಕಡಮೆಯಾಗಿತ್ತು. ಸಾಹು ಕಾರರು ಸರ್ಕಾರಕ್ಕೆ ೧೦೦೦ ರೂಪಾಯಿ ಸಾಲ ವನ್ನು ಕೂಡ ಕೊಡುವುದು ಕಷ್ಟವಾಗಿತ್ತು.

ಟೆಂಕಸಾಲೆ.

ಟೆಂಕಸಾಲೆ ಕೆಲಸವು ರಾಜಧಾನಿಯಲ್ಲಿಯೂಇತರ ಸ್ಥಳಗಳ ಲ್ಲಿಯೂ ಸಹಾ ಏಕ ಕಾಲದಲ್ಲಿ ಜರಗುತಿತ್ತು. ನಾಣ್ಯದ ತೂಕವೂ ಬಣ್ಣವೂ ನಿಷ್ಕರ್ಷೆಯಾಗಿ ದ್ದರೂ, ತಾಲ್ಲೋಕುದಾರರು ತಮ್ಮ ಸ್ವಪ್ರಯೋಜನಕ್ಕಾಗಿಬೆರಕೆ ಹಾಕಿ ಇತರ ಸ್ಥಳಗಳಲ್ಲಿ ನಾಣ್ಯಗಳನ್ನು ಮಾಡಿಸುತಿದ್ದರು.

ಇನಾಂದಾರರು.

ಜಹಗೀರ್ದಾರರೂ, ಜಮೀರ್ನದಾರರೂ, ಸರ್ಕಾರದೊಡನೆ ಮಾ ಡಿಕೊಂಡಿರುವ ಕರಾರಿನಂತೆ ನಡೆಯುತಿರಲಿಲ್ಲ. ಈ ಬಗೆ ಇನಾಂದಾರರು ಸರ್ಕಾರದ ಲೆಕ್ಕದಲ್ಲಿ ದಾಖಲೆಯೇ ಇಲ್ಲದೆ ಹೊಸ ಹೊಸದಾಗಿ ಹುಟ್ಟಕೊಂಡಿದ್ದರು. ಧರ್ಮದಾಯುಗಳು ಅನೇಕವಾಗಿದ್ದವು, ಮತ್ತು ಬಗೆಬಗೆಯಾಗಿದ್ದವು. ಇಂಥಾ ಇನಾಂಗಳು ಯಾವ ವಿಧಿಯನ್ನೂ ಅನುಸರಿಸಿದ್ದಾಗಿರಲಿಲ್ಲ.

ನ್ಯಾಯವಿಮರ್ಶೆ.

ನ್ಯಾಯವಿಮರ್ಶೆಯು ಬಹು ಕೆಟ್ಟುಹೋಗಿತ್ತು. ಕಾಸಿ, ಮುಫ್ತಿ, ಸದರತ್, ನಿಸಾಮತ್, ಈ ಅಧಿಕಾರಿಗಳು ಮತ ಸಂಬಂಧವಾದ ವಿಭಾಗಸಂಬಂಧವಾದ ಚಿಲ್ಲರೆ ವ್ಯಾಜ್ಯಗಳನ್ನು ತೀರ್ಮಾನ ಮಾಡುತಿದ್ದರು. ಸತಸಿ ಅದಾಲತ್ ಎಂಬ

ಅಧಿಕಾರಸ್ಥಾನದಲ್ಲಿ ನಾಲ್ಕುಜನ ಮೌಲ್ವಿಗಳು ಕೂತುಕೊಂತು ಫೈಸಲ್ಮಾಡುತಿದ್ದರು. ಈ ನ್ಯಾಯಸ್ಥಾನದ ಅಧಿಕಾರವು ಇತರ ನ್ಯಾಯಸ್ಥಾನದ ಅಧಿಕಾರದಂತೆ ಪಟ್ಟಣದಲ್ಲಿ ಮಾತ್ರ ವ್ಯಾಪಿಸಿತ್ತು. ಅದೂ ಕೂಡ ಅಯೋಗ್ಯವಾಗಿತ್ತು. ಸೀಮೆಯ ಒಳಗಡಿಗಳಲ್ಲಿ ನ್ಯಾಯಸ್ಥಾನ ಇರಲೇ ಇಲ್ಲ.

**ಪೋಲೀಸ್ ಇಲಾಖೆ.** ಪೋಲೀಸ್ ಅಥವಾ ಕಂದಾಚಾರದ ಏರ್ಪಾಡೂ ಹೀಗೆಯೇ ಅತಂತ್ರವಾಗಿತ್ತು. ಸಾಲಾಕೊಟ್ಟವರು ಸಾಲಾ ತೆಗೆದುಕೊಂಡವರ ಮನೆಯಸುತ್ತಲೂ ತಮ್ಮ ಕಡೇ ಜನರನ್ನು ದಂಗಾಕೂರಿಸಿ ಹಣ ವಸೂಲ್ಮಾಡುತಿದ್ದರು. ಯಾರು ಯಾರನ್ನು ಏನ ಮಾಡಿದರೂಕೇಳುವವರೇ ಇರಲಿಲ್ಲ. ಗೊರೆ ಮಂತ್ರಿ ಇವರ ಮನೇ ಬಾಗಿಲಲ್ಲಿಕೂಡ ದಂಗೆ ಕೂರಿಸಿ ಹಣ ವಸೂಲ್ಮಾಡುತಿದ್ದರು. ಈ ಬಗೆ ಸಾಲಗಾರರ ಕಾಟವನ್ನು ತಪ್ಪಿಸಿಕೊಂಡವರೇ ಇಲ್ಲ. ತುಂಟಜನರು ತಮ್ಮ ಮನಸ್ಸು ಬಂದಹಾಗೆ ದಾಂದಲೆ ಮಾಡುತಿದ್ದರು. ಇವರನ್ನು ಹಿಡಿಯ ತಕ್ಕವರೇ ಇರಲಿಲ್ಲ.

**ದಂಡಿನವರು.** ದಂಡಿನ ಜನರು ಸ್ವತಃ ತಂಟೆ ನಡಿಸುತಿದ್ದರು, ಇತರ ತಂಟೆಗಳನ್ನು ನಿಲ್ಲಸಲು ಯತ್ನಮಾಡುತಿರಲಿಲ್ಲ. ದಂಡಿನ ಜನರಿಗೆ ಯೋಗ್ಯರಾದ ಅಧಿಕಾರಿಗಳೇ ಇರಲಿಲ್ಲ. ತರಬೀಯತ್ತು ಎನ್ನುವುದು ಇಲ್ಲವೇ ಇಲ್ಲ. ಈ ದಂಡಿನವರೂ ತಮ್ಮ ಸಂಬಳಕ್ಕೋಸ್ಕರ ದಂಗ ಕೂತುಕೊಳ್ಳುತಿದ್ದರು.

**ವಿದ್ಯಾಭ್ಯಾಸ.** ಹೆಸರಿಗಾದರೂ ಸರಿಯಾದ ಪಾಠಶಾಲೆಗಳೇ ಇರಲಿಲ್ಲ. ಮೇಲ್‌ತರದ ನವಾಬರು ತಮ್ಮಮಕ್ಕಳಿಗೆ ವಿದ್ಯಾಭ್ಯಾಸಮಾಡಿಸುತಿರಲಿಲ್ಲ. ವಿದ್ಯಾಭ್ಯಾಸ ಮಾಡಿಸು

ವುದು ಅಲ್ಪರ ಕೆಲಸ, ತಮ್ಮ ಮಾನಕ್ಕೆ ತಡೆಯದೆಂದು ಇವರು ತಿಳಿದಿದ್ದರು. ವ್ಯಾಪಾರವೇನೇನೂ ನಡೆಯುತಿರಲಿಲ್ಲ. ರಹದಾರಿ, ರುಸುಮು, ಸುಂಕ ಇದೆಲ್ಲಾ ವಿಪರೀತವಾಗಿತ್ತು. ರಸ್ತೆಗಳು ಇಗಲೆ ಇಲ್ಲ. ಇದೆಲ್ಲಕ್ಕಿಂತಲೂ ಹೆಚ್ಚಾಗಿ ಸರ್ಕಾರದ ಉದ್ಯೋಗಸ್ಥರೆಲ್ಲಾ ಮನಸ್ಸು ಬಂದಹಾಗೆ ಬಹಿರಂಗವಾಗಿ ತೆಗೆದುಕೊಳ್ಳುತಾ ಇದ್ದ ಲಂಚದ ಹಾವಳಿಯು ವಿಪರೀತವಾಗಿತ್ತು.

ಹೊಸಏರ್ಪಾಡು.

ಹೈದರಾಬಾದು ರಾಜ್ಯವು ಸಾಲಾರಜಂಗನ ಆಡಳತಕ್ಕೆ ಬಂದಾಗ ಈ ಸ್ಥಿತಿಯಲ್ಲಿತ್ತು. ಈ ಪುರುಷನಿಗೆ ಮಂತ್ರಿತ್ವವಾದಕೂಡಲೇ ಇದೆಲ್ಲಾ ಸರಿಹೋಯಿತು. ಕಂದಾಯದ ವಸೂಲಿಗೆ ಯೋಗ್ಯರಾದ ಸರ್ಕಾರದ ಉದ್ಯೋಗಸ್ಥರನ್ನು ನೇಮಿಸಿದರು. ಹಣದ ವಸೂಲಿಗಾಗಿ ಗುತ್ತಿಗೆಗೆ ಕೊಡುವುದು ದಿನಕ್ರಮೇಣ ತೆಗೆದು ಹಾಕಲ್ಪಟ್ಟಿತು. ಹೈದರಾಬಾದಿನಲ್ಲಿಯೂ ಇತರ ಗಡಿಗಳಲ್ಲಿಯೂ ಖಜಾನೆಗಳು ಏರ್ಪಾಡಾದವು. ಸರ್ಕಾರದ ಅಡಳತವು ಎಲ್ಲಾ ವಿಷಯದಲ್ಲಿಯೂ ಖಂಡಿತವಾಗಿದ್ದಕಾರಣ ಅವರ ಹೆಸರು ಸಾಮ್ಯವಾಗುತಾ ಬಂತು. ಹೈದರಾಬಾದು ರಾಜ್ಯದಲ್ಲೆಲ್ಲಾ ಒಂದೇ ವಿಧವಾದ ಹಾಲಿಸಿಕ್ಕ ರೂಪಾಯಿ ಚಲಾವಣೆಗೆ ಬಂತು. ಸರಿಯಾದ ನ್ಯಾಯಸ್ಥಾನಗಳು ಏರ್ಪಾಡಾದವು. ಸರಿಯಾದ ಪೋಲೀಸ್ ಏರ್ಪಾಡಾಯಿತು. ದಂಡಿನ ಜನರೆಲ್ಲಾ ಕ್ರಮವಾಗಿ ತಯಾರ್ಮಾಡಲ್ಪಟ್ಟರು. ಈ ಕೆಲಸಕ್ಕೆ ಈ ದೇಶದ ಮತ್ತು ಯೂರೋಪು ದೇಶದ ಹುದ್ದೇದಾರರು ನೇಮಕವಾದರು. ಮೇಲ್‌ತರದ ಐಶ್ವರ್ಯವಂತರಿಗೆ ವಿದ್ಯಾಭ್ಯಾಸದ ವಿಷಯದಲ್ಲಿರುವ ತಿರಸ್ಕಾರ ಭಾವವನ್ನು ಹೋಗಲಾಡಿಸುವುದಕ್ಕೆ, ಸಾಲಾರಜಂಗನು ವಿದ್ಯಾಶಾಲೆಗಳನ್ನು ಏರ್ಪಡಿಸೀ ಅದಕ್ಕೆ ಯೋಗ್ಯರಾದ ಉಪಾಧ್ಯಾಯರುಗಳನ್ನು ನೇಮಕ ಮಾಡಿದ್ದೂ

ಅಲ್ಲದೆ ತನ್ನ ಅಣ್ಣನ ಮಗನನ್ನು ಅಂಥಾ ಸ್ಕೂಲುಗಳಿಗೆ ಕಳುಹಿಸಿದನು. ವೈದ್ಯಶಾಸ್ತ್ರವನ್ನೂ ಕಟ್ಟಡಗಳನ್ನು ಕಟ್ಟುವ ಶಿಲ್ಪಶಾಸ್ತ್ರವನ್ನೂ ಕಲಿಸಲು ಶಾಲೆಗಳು ಏರ್ಪಾಡಾದವು. ಇಂಗ್ಲಿಷ್ ಪಾಠಶಾಲೆಗಳು ಏರ್ಪಾಡಾದವು. ಸುಂಕದ ವಸೂಲಿಯು ನಿಲ್ಲಿಸಲ್ಪಟ್ಟಿತು. ಒಳ್ಳೇ ರಸ್ತೆಗಳೂ ಇತರ ಕಟ್ಟಡಗಳೂ ವಿಶೇಷವಾಗಿ ತಯಾರಾದವು. ಶಿಲ್ಕಾಪುರದ ಅಣೆ, ಅದರ ನಾಲೆ, ಬೊಂಬಾಯಿ ದೊಡ್ಡ ರಸ್ತೆ ಇವುಗಳ ಕೆಲಸಗಳೆಲ್ಲಾ ಶೀಘ್ರವಾಗಿ ನಡೆಯುತಾ ಬಂದವು. ಅರಬ್ಬರು ಸರಿಯಾಗಿ ನಡೆದುಕೊಳ್ಳುವ ಹಾಗೆ ಏರ್ಪಾಡಾಯಿತು. ಅಕ್ರಮವಾದ ಸಿಪಾಯಿದಂಡು ರೋಹಿಲೆಯವರು ಇವರೆಲ್ಲಾ ಅಡಗಿಸಲ್ಪಟ್ಟರು. ಈ ಪ್ರಕಾರ ಸೀಮೆಯಲ್ಲೆಲ್ಲಾ ಯೋಗ್ಯವಾದ ಹೊಸ ಏರ್ಪಾಡುಗಳನ್ನು ಮಾಡಿಸಿದರು. ಇದೇ ಮೊದಲಾಗಿ ಶಾಶ್ವಿತವಾದ ಏರ್ಪಾಡುಗಳನ್ನೆಲ್ಲಾ ಮಂತ್ರಿತ್ವದ ಅಧಿಕಾರ ಪ್ರಾಪ್ತವಾದ ನಾಲ್ಕು ವರುಷದೊಳಗಾಗಿ ಸಾಲಾರಜಂಗನು ನಿರ್ವಹಿಸಿದನು.

—o—

## ೧೦ನೇ ಅಧ್ಯಾಯ.

### ಗುಣಾತಿಶಯಗಳು.

ವಿದ್ಯಾಭ್ಯಾಸಂಗ

ಸಾಲಾರಜಂಗನು ಒಳ್ಳೇ ವಂಶದಲ್ಲಿ ಹುಟ್ಟಿ ಐಶ್ವರ್ಯದಲ್ಲಿ ಬೆಳೆದರೂ, ಬಾಲ್ಯದಲ್ಲಿ ದುರ್ಬಲನಾಗಿ ಯಾವುದಾದರೂ ಒಂದು ವಿಧವಾದ ದೇಹಾಲಸ್ಯಕ್ಕೆ ಗುರಿಯಾಗಿದ್ದನು. ಮುನೀರುಲ್ ಮುಲ್ಕನ ಹೆಂಡತಿಯಾದ ಈತನ ಅಜ್ಜಿಯು ವಿಶೇಷವಾದ ಪ್ರೇಮದಿಂದ ಸಾಕಿದರೂ, ಆಕೆ ಇವನಿಗೆ ಒಳ್ಳೇ ನಡತೆಯನ್ನೂ, ಉರದು, ಫಾರಸಿ, ಅರಬ್ಬಿ, ಮೊದಲಾದ ಭಾಷೆಗಳಲ್ಲಿ ತಕ್ಕಮಟ್ಟಿಗೆ ಓದುಬರಹವನ್ನೂ ಕಲಿಸಿದಳು. ಇವನ ೧೫ನೇ ವರುಷದಿಂದ ೧೯ನೇ ವರುಷದ ವರೆಗೆ ಇವನು ಸ್ವತಃ ಮಾಡಿದ ಓದುಗಾರಿಕೆಯು ಬಹಳವಾಗಿ ಉಪಯೋಗಕ್ಕೆ ಬಂತು. ಜಹಗೀರಿ ಗ್ರಾಮದ ಆಡಳತವನ್ನು ನೋಡಿಕೊಂಡು, ಬಂದು ಹೋದ ಹಣದ ವಿಚಾರವಾಗಿ ಅಜ್ಜಿಗೆ ತಿಳಿಸುವುದರಲ್ಲಿ ಲೆಕ್ಕಾಚಾರದ ಕ್ರಮವೆಲ್ಲಾ ಗೊತ್ತಾಯಿತು. ಮುಂದಕ್ಕೆ ರಾಜ್ಯಭಾರಕ್ರಮದಲ್ಲಿ ಈತ ನಿರ್ವಹಿಸಿದ ರಾಜಕಾರ್ಯಕ್ಕೆಲ್ಲಾ ಅಸ್ಥಿಭಾರ ಚೆನ್ನಾಗಿ ಬಿತ್ತು. “ಅಜ್ಜಿ ಸಾಕಿದ ಮಗು ಯಾವ ಕಜ್ಜಕ್ಕೂ ಬೇಡ” ಎನ್ನುವ ಹಾಗಾಗಲಿಲ್ಲ. ಈತನಿಗೆ ಇಂಗ್ಲಿಷ್ ಭಾಷೆಯೂ ಪರಿಚಯವಾಯಿತು.

ಇತರ ಗುಣಗಳು.

ಈತನಿಗೆ ಮೊದಲಿನಿಂದಲೂ ಡಂಭವಾಗದು. ಬೇಕಾದ ಒಡವೆಗಳನ್ನಿಟ್ಟು ಬೇಕಾದ ದುಕೂಲಗಳನ್ನು ಧರಿಸಿ ತನ್ನ ಸೌಂದರ್ಯವನ್ನೂ ಪ್ರತಿಷ್ಠೆಯನ್ನೂ, ತನ್ನ ಅಧಿಕಾರದ ಗೌರವವನ್ನೂ, ಇತರರಿಗೆ ಪ್ರಕಾಶಪಡಿಸತಕ್ಕ ಸ್ವಭಾವ ಈತನಲ್ಲಿರಲಿಲ್ಲ. ಈತನ ವಿನಯವನ್ನೂ, ನಮ್ರವಾದ

ಮಾತನ್ನೂ, ಎಲ್ಲರ ವಿಷಯದಲ್ಲಿಯೂ ಆದರವನ್ನೂ, ದೂರದೃಷ್ಟಿ ಯನ್ನೂ, ಸ್ವಾಮಿಭಕ್ತಿ ಕೃತಜ್ಞತೆಗಳನ್ನೂ, ಪರೋಪಕಾರ ದೃಷ್ಟಿ ಯನ್ನೂ ಈತನ ಶತ್ರುಗಳು ಕೂಡ ಅಂಗೀಕಾರ ಮಾಡುತ್ತಾರೆ. ಒಂದನ್ನು ನೋಡಿದರೆ ಹತ್ತಾಗಿ ಊಹಿಸುವ ಸಾಮರ್ಥ್ಯವು ವಿಶೇಷ ವಾಗಿತ್ತು. ನಸೀರುದ್ದೌಲ ಮತ್ತು ಇವನ ಮಗ ಅಫಸಲ್ ಉದ್ದೌ ಲ ಇವರ ಆಳಿಕೆಯಲ್ಲಿ ಮಂತ್ರಿಯು ತಮ್ಮ ಅಪ್ಪಣೆ ಇಲ್ಲದೆ ಹೈದ ರಾಬಾದನ್ನು ಬಿಟ್ಟು ಹೊರಕ್ಕೆ ಹೋಗಕೂಡದು, ರೆಸಿಡೆಂಟಸಾಹೇಬ ನನ್ನು ನೋಡಕೂಡದು ಎಂದು ನಿರ್ಬಂಧಮಾಡಿದ್ದರು. ಸಾಲಾರ ಜಂಗನಿಗೆ ಇದು ಒಂದು ಬಗೆ ಸೆರೆಯಾಗಿತ್ತು. ಹೀಗೆ ತಂದೆಮಕ್ಕ ಳಾದ ಇಬ್ಬರು ನಿಸಾಮರಿಗೂ ವಸೀರನಲ್ಲಿ ಏನೋ ಇಲ್ಲದ ಅನು ಮಾನವಿತ್ತು. ಆದರೂ ಇಂಥಾ ನಿರ್ಬಂಧದಲ್ಲಿ ಹಿಂದೆ ಹೋಗು ವುದಕ್ಕೂ ಮುಂದೆ ಬರುವುದಕ್ಕೂ ಮಾರ್ಗವಿಲ್ಲದೆ ನರಳುತಿದ್ದಾ ಗ್ಯೂ, ಸೀಮೆಮೇಲಿನ ಆಡಳಗಳನ್ನೂ ಅಲ್ಲಲ್ಲಿರುವ ಜನರ ಸ್ವಭಾ ವವನ್ನೂ ಸರಿಯಾಗಿ ತಿಳಿದುಕೊಂಡಿದ್ದನು. ಈ ಸಾಮರ್ಥ್ಯವು ಸಾಧಾರಣವಾದ್ದಲ್ಲ. ಈತನ ಸ್ವಭಾವದಲ್ಲಿ ದುಡುಕು ಸ್ವಲ್ಪವೂ ಇಲ್ಲ. ನಿಧಾನವಾಗಿ ಯೋಚಿಸಿಯೇ ಯಾವ ಕೆಲಸವನ್ನೂ ಮಾ ಡುತಿದ್ದನು.

ಇದೂ ಅಲ್ಲದೆ ಇಂಗ್ಲಿಷರಿಗೆ ಸೇರಿದ ದೇಶಗಳನ್ನೂ ಅಲ್ಲಿನ ರಾಜ್ಯಭಾರಕ್ರಮವನ್ನೂ ಸ್ವತಃ ನೋಡದೇ ಇದ್ದಾಗ್ಯೂ, ಅದೆಲ್ಲ ವನ್ನೂ ಅಷ್ಟು ಚಿಕ್ಕವಯಸ್ಸಿನಲ್ಲಿಯೇ ವಿಚಾರಮಾಡಿ ತಿಳಿದು ಕೊಂಡು ಅದರ ಪ್ರಕಾರ ಇಲಾಖೆಗಳನ್ನು ಏರ್ಪಾಡುಮಾಡಿದನು. ಹೀಗೆ ಮಾಡುವುದರಲ್ಲಿ ಖರ್ಚು ವಿಶೇಷವಾಗಿ ಹೆಚ್ಚದ ಹಾಗೂ ಸರ್ಕಾರದ ಆಡಳತ ಸರಿಯಾಗಿ ನಡೆಯುವ ಹಾಗೂ ಮಾಡಿ

ಸಿದನು. ನ್ಯಾಯಸ್ಥಳಗಳನ್ನು ಏರ್ಪಡಿಸುವುದರಲ್ಲಿ ಪ್ರಜೆಗಳಿಗೆ ಹೆಚ್ಚಾಗಿ ಖರ್ಚಾಗದೆ ನ್ಯಾಯ ದೊರೆಯುವ ಹಾಗೆ ಮಾಡಿದನು. ಸರ್ಕಾರದ ನೌಕರರಲ್ಲಿ ಲಂಚವು ವಿಶೇಷವಾಗಿತ್ತು. ಕೆಲವು ಕಂಡ ಹಾಗೂ ಕೆಲವು ಕಾಣದಹಾಗೂ ಜರಗುತಿದ್ದವು. ಕೈಬೆಚ್ಚಗಾದ ಹೊರತು ಯಾವ ಸರ್ಕಾರಿ ನೌಕರನೂ ಯಾವ ಕೆಲಸವನ್ನೂ ಮಾಡುತಾ ಇರಲಿಲ್ಲ. ಉದ್ಯೋಗಸ್ಥರಿಗೆ ನಸರುಗಳೂ ಇನಾಮುಗಳೂ ಬೇಕಾದ ಹಾಗೆ ನಡೆಯುತಿದ್ದವು. ಇದೆಲ್ಲವನ್ನೂ ಕೂಡಿದಮಟ್ಟಿಗೂ ಕಡಮೆಮಾಡಿದನು. ಯೋಗ್ಯರ ಸಹವಾಸ ಮಾಡುವುದರಲ್ಲಿಯೇ ಇಚೆ. ಕೆಟ್ಟವರು ಎಂಥಾ ಐಶ್ವರ್ಯವಂತರಾಗಲಿ ಎಂಥಾ ಪದವಿಯಲ್ಲಿರಲಿ ಅವರಲ್ಲಿ ದ್ವೇಷವನ್ನು ಸಾಧಿಸುತಿದ್ದನು. ಕೆಟ್ಟವರನ್ನು ಮೂಲೋತ್ಪಾಟನ ಮಾಡುವ ಸ್ವಭಾವವು ಸತ್ಪುರುಷರಿಗೆ ಯಾವಾಗಲೂ ಸಹಜವಾದ ಗುಣವಾಗಿದೆ. ದುರ್ಮಾರ್ಗರು ಎಷ್ಟೇಮಿತ್ರರಾಗಿರಲಿ, ಅವರನ್ನು ಮುರಿದು ಕೆಟ್ಟತನ ಕಡಮೆಯಾಗುವ ತನಕ ಅವರಲ್ಲಿ ದ್ವೇಷವನ್ನು ಸಾಧಿಸುವುದು ಉತ್ತಮ ಪುರುಷ ಲಕ್ಷಣ.

**ದಿವಾನ ರಂಗಾಚಾರ್ಯರಿಗೂ ಸಾಲಾರ ಜಂಗನಿಗೂ ಹೋಲಿಕೆ.**

ಮೈಸೂರ ದಿವಾನ ರಂಗಾಚಾರ್ಯರಲ್ಲಿಯೂ ಈ ಗುಣ ವಿಶೇಷವಾಗಿತ್ತು. ಇದೇ ಅಲ್ಲದೆ ಇನ್ನೂ ಕೆಲವು ಗುಣಗಳಲ್ಲಿ ಈ ಇಬ್ಬರು ದಿವಾನರಿಗೂ ಹೋಲಿಕೆಯಿತ್ತು. ಲಂಚ ತೆಗೆದುಕೊಳ್ಳತಕ್ಕವರನ್ನು ಕಂಡರೆ ಇಬ್ಬರಿಗೂ ದ್ವೇಷ. ಡಂಭವಿಲ್ಲದಿರುವುದು, ಉಡಿಗೆ ತೊಡಿಗೆಗಳಲ್ಲಿ ಅತ್ಯಂತ ಸಾಧಾರಣವಾಗಿರುವುದು, ಕಕ್ಷಿಗಾರರಿಗೆ ವಿಶೇಷವಾಗಿ ಖರ್ಚಿಲ್ಲದೆ ನ್ಯಾಯ ದೊರೆಯುವ ಏರ್ಪಾಡಗಳನ್ನು ಮಾಡುವುದು, ಯೂರೋಪು ಸರ

ದಾರರಲ್ಲಿ ವಿನಯವಾಗಿಯೇ ಇದ್ದು ತಮ್ಮ ಹಠವನ್ನು ಸಾಧಿಸು ವುದು, ತನ್ನ ಯಜಮಾನನನ್ನು ಬಿಟ್ಟುಕೊಡದೇ ಇರುವುದು, ಪ್ರಜೆ ಗಳು ಅಕ್ಷರಸ್ಥರಾಗುವ ವಿಷಯದಲ್ಲಿ ಬೇಕಾದ ಪ್ರೋತ್ಸಾಹ ಕೊ ಡುವುದು, ಯೂರೋಪಿನ ಜನರನ್ನು ಉದ್ಯೋಗಕ್ಕೆ ಪೆಚ್ಚಾಗಿ ಸೇರಿ ಸದೇ ಇರುವುದು, ಇದೆಲ್ಲಾ ಈ ಉಭಯ ದಿವಾನರಿಗೂ ಸಮಾನ ಧರ್ಮಗಳಾಗಿದ್ದವು. ಸ್ವಾಮಿಕಾರ್ಯವನ್ನು ನೆರವೇರಿಸುವುದರಲ್ಲಿ ಸಾಲಾರಜಂಗನು ತನ್ನ ಪ್ರಾಣದಮೇಲೆ ದೃಷ್ಟಿ ಇಡುತಿರಲಿಲ್ಲ; ರಂಗಾಚಾರಿಯು ಹಣದ ಮೇಲೂ ಮಾನದ ಮೇಲೂ ದೃಷ್ಟಿ ಇಡು ತಿರಲಿಲ್ಲ. ಯೋಗ್ಯರನ್ನು ಕಂಡರೆ ಇಬ್ಬರೂ ಪುರಸ್ಕರಿಸುತಿದ್ದರು. ಆದರೆ ಸಾಲಾರಜಂಗನಿಗೆ ರಾಜ್ಯಭಾರದಲ್ಲಿದ್ದ ಕಷ್ಟ ರಂಗಾಚಾರಿಗೆ ಇರಲಿಲ್ಲ. ಸಾಲಾರಜಂಗನು ರಾಣಿವಾಸದವರ ಮನಸ್ಸು ಸಂಕೋ ಚವಾಗದಂತೆ ನಡೆದುಕೊಳ್ಳುತಿದ್ದನು. ರಂಗಾಚಾರಿಯು ಒಂದೊಂ ದು ವೇಳೆ ತನ್ನ ಒಳ್ಳೇ ಕಾರ್ಯಗಳನ್ನು ಸಾಗಲೀಸದೇ ಇರುವ ಜನಾ ಸಿಯವರ ವಿಷಯದಲ್ಲಿ ಅಲ್ಪದುಃಖಗಳಿಗೆ ಗುರಿಯಾಗುತಿದ್ದನು. ರಾಜನ ವಿದ್ಯಾಭ್ಯಾಸದ ವಿಚಾರದಲ್ಲಿ ಸಾಲಾರಜಂಗನು ಬಾಲಕನ ದೇಹಪ್ರಕೃತಿಯನ್ನೂ ಸ್ಥಿತಿಯನ್ನೂ ಅನುಸರಿಸಬೇಕಾಗಿತ್ತು; ರಂಗಾ ಚಾರಿಯು ಈ ಭಾಗದಲ್ಲಿ ವಿಶೇಷವಾದ ಶ್ರದ್ಧೆಯನ್ನು ವಹಿಸಿದ್ದನು. ರಾಜನ ಸಮೀಪದಲ್ಲಿ ಅಲ್ಪರು ಸೇರದ ಹಾಗೆ ಮಾಡುವುದು ಸಾಲಾ ರಜಂಗನಿಗೆ ಸಾಧ್ಯವಾಗಲಿಲ್ಲ; ಈ ವಿಚಾರದಲ್ಲಿ ರಂಗಾಚಾರಿಯು ಯಾವ ದಾಕ್ಷಿಣ್ಯವನ್ನೂ ನೋಡದೆ ಜನರನ್ನು ದೂರಮಾಡುತಿದ್ದನು. ಇಂಥಾ ಮಂತ್ರಿಗಳು ಯಾವ ದೊರೆಗೆ ಸಿಕ್ಕುವರೋ ಅವನೇ ಪುಣ್ಯ ವಂತ. ಇವರಿಬ್ಬರಿಗೂ ಕೆಲಸ ಮಾಡುವ ವಿಷಯದಲ್ಲಿ ಲೇಶವೂ ಪಾಲುಮಾರಿಕೆಯೂ ಇಲ್ಲ, ತಾತ್ಸಾರವೂ ಇಲ್ಲ.

ದಿನಚರಿ ಮಾಡುತಿದ್ದ ಕೆಲಸ.

ಸಾಲಾರಜಂಗನು ದಿನಚರಿ ತನ್ನ ಉದ್ಯೋಗ ಧರ್ಮದ ಕಾರ್ಯವನ್ನು ನಿರ್ವಾಹವಮಾಡುತಿದ್ದ ರೀತಿಯು ಮನಸ್ಸಾಕ್ಷಿಯಾಗಿ ಕೆಲಸಮಾಡತಕ್ಕವರಿಗೆ ಮಾರ್ಗದರ್ಶಿಯಾಗಿಯೂ ಧರ್ಮಾಧರ್ಮ ವಿವೇಚನೆ ಇಲ್ಲದೆ ಉದ್ಯೋಗಮಾಡತಕ್ಕವರಿಗೆ ಮನಸ್ಸಿನೊಳಗಿನ ತುಕ್ಕು ಮುಳ್ಳಾಗಿಯೂ ವರ್ತಿಸುವ ಹಾಗಿದೆ.

ಸಾಲಾರಜಂಗನಿಗೆ ಪ್ರತಿದಿವಸದಲ್ಲಿಯೂ ಕಾಲ ಹೇಗೆ ವಿಭಜನೆಯಾಗಿತ್ತೆಂದರೆ :—

ಬೆಳಗ್ಗೆ ೬ ಘಂಟೆಯಿಂದ ೧೦॥ ಘಂಟೆ ವರಿಗೆ.

ಫಿಲ್ ಖಾನೆ.

ಬಹಿರಂಗವಾದ ದರ್ಬಾರು, ಫಿರ್ಯಾದು ಕೇಳುವುದು.

ಹಾಸಿಗೆಯಿಂದ ಎದ್ದು ಸ್ನಾನ, ತರುವಾಯಬಂದು ಬಟ್ಟೆಲು ಚ ತೆಗೆದುಕೊಳ್ಳುವುದು. ಆನೇಲಾಯದ [ಪೀಲ್ ಖಾನೆ] ದರೋಗರು ಬಂದು ತಮ್ಮ ವರದಿ ಹೇಳಿಹೋಗುವುದು. ಈ ದರ್ಬಾರಿಗೆ ದೀನಾನಾಥರು, ಬಡವರು, ಭಾಗ್ಯವಂತರು, ಹುದ್ದೇದಾರರು, ತಾಬೇದಾರರು, ಎಂಬ ಭೇದಗಳಿಲ್ಲದೆ ಎಲ್ಲರೂ ಬರಬಹುದಾಗಿತ್ತು. ಬೇಕಾದವರು ಬೇಕಾದ ಫಿರ್ಯಾದುಗಳನ್ನು ಹೇಳಿಕೊಳ್ಳಬಹುದಾಗಿತ್ತು. ಬಂದವರನ್ನು ಜವಾನರು ತಡೆಯುವುದು, ಬಂದವರು ಚೀಟಿಯನ್ನು ಮನೆಯೊಳಕ್ಕೆ ಕಳುಹಿಸುವುದು ಈ ಇಂಗ್ಲಿಷ್ ಪದ್ಧತಿ, ಬೇಕಾಬಿಟ್ಟಿ ವಿಚಾರಣೆ, ಕಾಗದವನ್ನು ನೋಡದೆ ಫೈಸಲು ಹೇಳುವುದು—ಇದೆಲ್ಲಾ ಆತನಿಗೆ ಗೊತ್ತಿರಲಿಲ್ಲ. ಈಗಿನ ಅಧಿಕಾರಿಗಳ ಹಾಗೆ ತಾನು ಸರ್ವಂಕುಶಪ್ರಜ್ಞ ಎಂದು ತಿಳಿದುಕೊಂಡಿರಲಿಲ್ಲ. ಬಂದ ಜನರ ಸಂಗತಿಯನ್ನೆಲ್ಲಾ ನಿಧಾನವಾಗಿ ವಿಚಾರಿಸಿ ತಿಳಿದುಕೊಳ್ಳತಕ್ಕದ್ದು ಅಧಿಕಾರಿಯ ಮೊದಲನೇ ಕೆಲಸವೆಂದು ತಿಳಿದುಕೊಂಡಿದ್ದನು.

ದಂಡಿನವರ ವರದಿ.

ತರುವಾಯ ದಂಡಿನ ಜಮೂದಾರರ ವರದಿಯಾಗುತಿತ್ತು. ಕೂಡಲೆ ಮಂತ್ರಿಯು ಒಳಗಡೆ ಕೊಠಡಿಯಲ್ಲಿ ಹೋಗಿ ಕೂತುಕೊಂಡು ಭಂಡಾರದ ಜಮಾಖರ್ಚು ಲೆಕ್ಕಗಳನ್ನು ನೋಡುತಿದ್ದನು.

ಸುನಾವಣೆ.

ತರುವಾಯ ಮುನಷಿಯು ತನ್ನ ಕಾಗದಗಳನ್ನು ತಂದು ಸುನಾವಣೆ ಮಾಡಿ ಅದರ ಮೇಲೆ ಧಣಿಯ ಅಪ್ಪಣೆಯನ್ನು ಪಡೆದು ಹೋಗುತಿದ್ದನು.

ಅದಾಲತ್ತೆ ನಿಸಾಂ.

ಈ ಅಧಿಕಾರಿಯು ನ್ಯಾಯವಿಧಾಯಕವಿಚಾರವನ್ನು ನೋಡತಕ್ಕವನು. ಈತನು ತನ್ನ ಕಾಗದಗಳೊಡನೆ ಬಂದು ತನ್ನ ಇಲಾಖೆ ವಿಷಯಗಳನ್ನು ವರದೀಮಾಡಿ ಹೊರಟುಹೋಗುತಿದ್ದನು.

ಗಂಟೆ ೧೦॥

ಊಟ ಕಾಲು ಗಂಟೆ; ಕೂಡಲೆ ಮುನಷಿ ಬಂದು ಕಾದಿರುವನು. ಹಿಂದಿನ ದಿವಸ ತೆಗೆದುಕೊಂಡ ಅರ್ಜಿಯಮೇಲೆ ಹುಕುಂಗಳು, ಚಿಲ್ಲರೆ ಕೆಲಸಗಳು, ಭೇಟಿಗಾಗಿ ಬಂದವರೊಡನೆ ಮಾತನಾಡುವುದು.

ಗಂಟೆ ೧೧॥

ಇತರ ಉಂದಾಗಳು, ಅರಮನೆಯಿಂದ ಬಂದ ಜನರು, ಷಹರ್ ಕೊತ್ವಾಲ, ಇವರುಗಳು ಬಂದು ಭೇಟಿ ತೆಗೆದುಕೊಳ್ಳುತಿದ್ದರು. ಈ ಭೇಟಿಯು ದರ್ಬಾರು ರೀತಿಯಲ್ಲಿ ಕೊಡತಕ್ಕದ್ದು; ಅವರು ಹೇಳತಕ್ಕ ವಿಷಯಗಳನ್ನು ಕೇಳತಕ್ಕದ್ದು. ರಹಸ್ಯವಾದ ವಿಚಾರಕುರಿತು ಮಾತನಾಡಬೇಕಾದವರನ್ನು ವಜೀರನು ತನ್ನ ಅಂತರಂಗವಾದ ಕೊಠಡಿಗೆ ಕರೆದುಕೊಂಡು ಹೋಗತಕ್ಕದ್ದು, ಅಲ್ಲಿ ಅವರ ಸಂಗಡ ಬೇಕಾದ ಸಂಭಾಷಣೆ ಮಾಡತಕ್ಕದ್ದು.

ತರುವಾಯ ನಿಸಾಮನ ಹರಿಕಾರರು ಬಂದು ವರದೀ ಹೇಳತಕ್ಕದ್ದು, ರೆಸಿಡೆಂಟು ಸಾಹೇಬನಿಂದ ಬಂದ ಲೇಖನಗಳಿಗೆ ಜವಾಬು ಬರಿಸುವುದು, ತರುವಾಯ ಇನ್ನು ಯಾವ ಇತರ ಆತುರವಾದ ಕೆಲಸಗಳೂ ಇಲ್ಲದಿದ್ದರೆ ಅರ್ಧಗಂಟೆ ವಿಶ್ರಾಂತಿ.

ಗಟೆಂ ೨

ಮಧ್ಯಾಹ್ನದ ನವಾಜು. ದಫ್ತರದಾರರು (ಮುಲ್ಕಿಬಾಬಿನ ರಿಕಾರ್ಡಿನವರು), ಮುತ್ಸದ್ದಿಗಳು, ಜಮೂದಾರರು, ದಂಡಿನ ಷರಿಸ್ತೇದಾರರು, ತಾಲ್ಲೂಕುದಾರರು, ಇತರರು—ಇವರುಗಳನ್ನು ಕಂಡು ಮಾತನಾಡಿ ಅವರ ಇಲಾಖೆಗೆ ಸಂಬಂಧಪಟ್ಟ ಕಾಗದಗಳನ್ನು ಫೈಸಲ್ಮಾಡಿಸುವುದು, ಸಾಹುಕಾರರು ಬಂದು ಭೇಟಿತೆಗೆದುಕೊಳ್ಳತಕ್ಕದ್ದು. ತರುವಾಯ ಆಯಾ ಇಲಾಖೆಗಳ ಲೆಕ್ಕಗಳನ್ನು ನೋಡಿ ಅಪ್ಪಣೇ ಮಾಡತಕ್ಕದ್ದು. ರೆಸಿಡೆಂಟರ ಕಾಗದಗಳನ್ನು ತೆಗೆದುಕೊಳ್ಳುವುದು, ನಿಸಾಮರ ಕಡೆ ವಕೀಲರ ಆಗಮನ.

ಗಂಟೆ ೫||-೬

ತೋಟಕ್ಕೆ ಹೋಗುವುದು, ಪಾದಚಾರಿಯಾಗಿಯೋ ಕುದುರೇಮೇಲೋ ಗಾಡಿಮೇಲೋ ಸವಾರಿ ಹೊರಡುವುದು, ಇದು ಅರ್ಧಗಂಟೆ ಹಿಡಿಯುವುದು; ಈ ಕಾಲದಲ್ಲಿ ನಿಸಾಮನ ಕುದುರೆಗಳನ್ನೂ, ಮಂತ್ರಿಯ ಕುದುರೆಗಳನ್ನೂ, ಪರಾಂಬರಿಕೆಗಾಗಿ ಈಚೆಗೆ ತರುವರು. ತರುವಾಯ ಸ್ವಂತ ಕೊಠಡಿಗೆ ಅರ್ಧಗಂಟೆ ಹೊತ್ತು ಹೋಗಿ ನವಾಸು ಮಾಡುವುದು, ರಾತ್ರೆ ಊಟ ಅರ್ಧ ಗಂಟೆ, ತರುವಾಯ ತಾಲ್ಲೋಕುದಾರರಿಂದ ಬಂದ ಕಾಗದಗಳಿಗೆ ಉತ್ತರ ಬರಿಸಲು ಹುಕ್ಕುಂ ಮಾಡುವುದು, ಸಂಬಳದ ಹಣದ ವಿಚಾರ, ತಾಲ್ಲೂಕು ಲೆಕ್ಕಗಳನ್ನು ನೋಡುವುದು, ರೆಸಿಡೆಂಟರಿಗೆ ಬರಿಸತಕ್ಕ ರಹಸ್ಯವಾದ ಕಾಗದಗಳನ್ನು ಮಸೂದೆ ಮಾಡಿಸುವುದು.

ರಾತ್ರಿ ೧೦॥-೧೧—ಗಂಟೆಯಲ್ಲಿ ಮಲಗಿಕೊಳ್ಳುವುದು.

ಈ ಪ್ರಕಾರ ಸ್ವಲ್ಪವೂ ವ್ಯವಧಾನವಿಲ್ಲದೆ ಸಾಲಾರಜಂಗನು ಕೆಲಸ ಮಾಡುತಿದ್ದನು. ಈಗಿನ ಕಾಲದಲ್ಲಿ ಜನರು ಸ್ವಲ್ಪ ಇಂಗ್ಲೀಷನ್ನು ಓದಿಕೊಂಡು ಒಂದು ಗಂಟೇಹೊತ್ತು ಪಟ್ಟಾಗಿ ಕೆಲಸಮಾಡಿದರೆ "ತನಗೆ ತಲೆನೋವು ಬಂತು, ಕಣ್ಣು ಉರಿಯುವುದು, ಹವಾ ತೆಗೆದುಕೊಳ್ಳಬೇಕು", ಎಂದು ಅಭ್ಯಾಸವಾದ ಮೈಗಳ್ಳತನದ ಅಂಗಿಯನ್ನು ತೊಟ್ಟುಕೊಳ್ಳುವರು. ಇಂಥವರಿಗೆಲ್ಲಾ ಮೂಳಪ್ರತಿಷ್ಠೆಯೇ ದೊಡ್ಡತನ, ಇವರು ಮಾಡುವ ಅಲ್ಪಕಾರ್ಯಗಳೇ ಮಹಾಕಾರ್ಯನಿರ್ವಾಹ.

# ೧೧ನೆ ಅಧ್ಯಾಯ.

## ಶತ್ರುಗಳ ಆಕ್ಷೇಪಣೆ, ಅದಕ್ಕೆ ಸಮಾಧಾನ.

ಹಗೆಗಳ ಆಕ್ಷೇಪಣೆ

ಹಿಂದೂಸ್ಥಾನದಲ್ಲಿದ್ದು ಗವರ್ನರು ಮೊದಲಾದ ಭಾರಿ ಹುದ್ದೆಗಳನ್ನು ಮಾಡಿದಂಥಾ, ಮತ್ತು ಸಾಲಾರಜಂಗನಿಗೆ ಕೇವಲ ಮಿತ್ರರಾಗಿದ್ದಂಥಾ, ಡ್ಯೂಕ್ ಸದರ್ಲ್ಯಾಂಡು, ಮದರಾಸು ಗವರ್ನರಾಗಿದ್ದ ಲಾರ್ಡ್‌ನೇಪಿಯರು, ಸರ್ ಜಾರ್ಜ್‌ಯೂಲ್ ಎಂಬ ಹಿಂದಿದ್ದ ರೆಸಿಡೆಂಟು, ಬೊಂಬಾಯಿ ಗವರ್ನರಾಗಿದ್ದ ಸರ್ ಬಾರ್ಟಲ್ ಫ್ರಿಯರು, ಸರ್ ರಿಚ್ಚರ್ಡ್‌ಟೆಂಪಲ್, ಇವರೇ ಮೊದಲಾಗಿ ಅನೇಕ ಜನ ಯೂರೋಪಿನ ಸ[illegible] ದಾರರು ಸಾಲಾರಜಂಗನ ಯೋಗ್ಯತೆಯನ್ನು ಚೆನ್ನಾಗಿ ತಿಳಿ[illegible] ಅವನಿಗೆ ವಿಶೇಷವಾಗಿ ಮರ್‍ಯಾದೆ ಮಾಡುತಿದ್ದರು. ಆದರೆ ಸಾಂ[illegible] ರ್ಸ್, ಮಿಾಡು, ಮೊದಲಾದ ಸಾಹೇಬರಿಗೆ ಈತನಲ್ಲಿ ಹೆಚ್ಚಾದ ಅ[illegible] ಸಮಾಧಾನವಿತ್ತು. ಈ ಮಂತ್ರಿಯ ವಿಷಯದಲ್ಲಿ ವಿರೋಧಪಕ್ಷ[illegible] ಸೇರಿದ ಅನೇಕರು ಯೂರೋಪಿನಲ್ಲಿ ಈತನಿಗೆ ಆದ ಮರ್‍ಯಾ[illegible] ಕುರಿತು ಅಸೂಯೆಪಟ್ಟು ಈತನ ಮಾನಕ್ಕೆ ಲೋಪವನ್ನು ತ[illegible] ಬೇಕೆಂದು ಬಹಳ ಪ್ರಯತ್ನಮಾಡಿದರು. ಈ ವಜೀರನ ವಿ[illegible] ರದಲ್ಲಿ ಅವರು ಮಾಡಿದ ಆಕ್ಷೇಪಣೆಗಳು ಏನೆಂದರೆ:—

ವಿದೇಶದವರ ಬಳಕೆ.

೧. ಸಾಲಾರಜಂಗನು ಇತರ ದೇಶದ [illegible] ರನ್ನು ಇಟ್ಟುಕೊಂಡಿದ್ದ ಬಳಕೆ ಅನುಮಾನ[illegible] ದವಾಗಿದೆ.

ಇಂಥಾ ಬಳಕೆ ಯಾವುದು? ಅಂಥ ಅನ್ಯದೇಶೀಯರು ಯಾ[illegible] ಬ್ರಿಟಿಷ್‌ಸರ್ಕಾರದವರ ಅನುಮತಿ ಇಲ್ಲದೆ ಅನ್ಯದೇಶೀಯ[illegible] ಯಾರನ್ನೂ ನಿಜಾಮನು ತನ್ನ ಸರ್ಕಾರಿ ಕೆಲಸದಲ್ಲಿ ಇಟ್ಟುಕೆ[illegible]

ಕೊಡದೆಂದು ಇಂಗ್ಲಿಷರಿಗೂ, ನಿಜಾಂಸರ್ಕಾರಕ್ಕೂ ಆಗಿರುವ ತಹಾ ನಾಮೆಯಲ್ಲಿ ಸ್ಪಷ್ಟವಾಗಿ ನಮೂದಿದೆ. ಅನ್ಯದೇಶೀಯರು ಯಾರನ್ನು ಹೈದರಾಬಾದಿನ ಚಾಕರಿಗೆ ಕರಿಸಬೇಕಾದರೂ ರೆಸಿಡೆಂಟನಿಗೆ ತಿಳಿಸಿ ಇಂಡಿಯಾ ಸರ್ಕಾರದವರ ಅನುಮತಿಯನ್ನು ಹೊಂದಿಯೇ ಕರಸು ತಿದ್ದರು. ಇಂಥವರಲ್ಲದೆ ಬೇರೆಅನ್ಯದೇಶೀಯರು ಯಾರೂ ಹೈದರಾ ಬಾದಿಗೆ ಬರಲಿಲ್ಲ. ಅಂಥವರಲ್ಲಿ ಇನ್ನು ಯಾವ ವಿಧವಾದ ಬಳಕೆ ಯೂ ಇರಲಿಲ್ಲ. ಹಾಗೆ ಬಂದಿದ್ದರೆ ಇಂಗ್ಲಿಷರಿಗೆ ತಿಳಿದೇ ಇರ ಬೇಕು. ಅಂಥವರನ್ನು ರೆಸಿಡೆಂಟನು ಬಿಡಲು ಕಾರಣವೇನು ?

ರಾಜ್ಯಭಾರ ಕ್ರಮದಲ್ಲಿ ಸಾಲಾರಜಂಗನು ಮಾಡಿದ ಹೊಸ ಏರ್ಪಾಟಿಗಾಗಿ ಜನರು ಬೇಕಾಯಿತು. ಬಳದೇಶದಲ್ಲಿದ್ದ ಉಂದಾ ಗಳ ವಂಶೀಯರು ವಿಶೇಷವಾಗಿ ಸರ್ಕಾರದ ಕೆಲಸವನ್ನು ಪರಾಪೇಕ್ಷೆ ಇಲ್ಲದೆ ನಡಿಸಿಕೊಂಡು ಹೋಗುವಷ್ಟು ವಿದ್ಯಾವಂತರಾಗಿಯೂ, ಬುದ್ಧಿ ಶಾಲಿಗಳಾಗಿಯೂ, ವಿಧೇಯರಾಗಿ ಮೈಬಗ್ಗಿ ಕೆಲಸಮಾಡತಕ್ಕವರಾ ಗಿಯೂ, ಇರಲಿಲ್ಲ. ಸಾಧಾರಣ ಜನರಲ್ಲಿ ಈಗಿನ ಹೊಸ ರೀತಿಯ ಪ್ರಕಾರ ಓದಿ ವಿದ್ಯಾವಂತರಾಗಿ ತಯಾರಾದವರು ಇರಲಿಲ್ಲ. ಬಾಲ ಕರನ್ನು ತಯಾರು ಮಾಡುವುದಕ್ಕೆ ವಿದ್ಯಾಶಾಲೆಗಳು ದೇಶದಲ್ಲಿ ಯಾ ವುದೂ ಇರಲಿಲ್ಲ. ಆದ್ದರಿಂದ ಹೊಸ ಏರ್ಪಾಡು ಮಾಡಿದಮೇಲೆ ಆಯಾ ಉದ್ಯೋಗಗಳಿಗೆ ಬೇಕಾದ ಜನರನ್ನು ಇತರ ಕಡೆಯಿಂದ ತರಲೇಬೇಕಾಯಿತು. ಈ ಕಾರಣದಿಂದ ಹಿಂದುಸ್ಥಾನಿಗಳು, ಪಂಜಾ ಬಿಗಳು, ಮೊದಲಾದವರು ಇಲ್ಲಿ ಉದ್ಯೋಗಕ್ಕೆ ಬರಲೇಬೇಕಾಯಿತು. ಆಗಾಗ್ಯೆ ಬಂದ ರೆಸಿಡೆಂಟರು ರಾಜ್ಯಭಾರ ಮಾಡಿದ್ದರೂ ಹೊಸಜನ ರನ್ನು ತರಲೇಬೇಕಾಗಿತ್ತು. ಇವರು ಹೊರತು ಬೇರೇ ಹೊಸಜನರು ಬರುವುದು ಅಸಾಧ್ಯ. ಸುತ್ತಲೂ ಇಂಗ್ಲಿಷರ ಸೀಮೆ; ನಿಜಾಂ ಸರ್ಕಾರ ದವರು ನಡಿಸಿದಪ್ರತಿಯೊಂದು ಕಾರ್ಯವನ್ನೂ ನೋಡಿಕೊಂಡು ಕೂತಿ

ರಲು ರೆಸಿಡೆಂಟೆಂಬ ದೊಡ್ಡ ಪಹರೇದ ಸರದಾರ; ಸ್ವಲ್ಪ ವ್ಯತಾಸ ನಡೆದರೂ ಮೇಲಿನವರಿಗೆ ದಿನಚರಿ ಆಗುವ ವರದಿ; ಮತ್ತು ಇಂಗ್ಲಿಷ್ ಸೇನೆಯನ್ನು ನುಗ್ಗಿಸಿ ದೇಶವನ್ನೇ ಧೂಳೀಪಟವಮಾಡುತೇವೆಂಬ ಇಂಗ್ಲಿಷರ ಭಯ. ಇದೆಲ್ಲಾ ಇರುವಾಗ ಅನ್ಯದೇಶೀಯರ ಸಂಪರ್ಕವನ್ನು ಸಾಲಾರಜಂಗನು ಇಟ್ಟುಕೊಂಡಿದ್ದನೆಂದು ಹೇಳಿದರೆ ನಂಬುವುದಕ್ಕೆ ದಾರಿ ಇಲ್ಲ. ಹಾಗೆ ದೋಷಾರೋಪಣೆ ಮಾಡತಕ್ಕವರು ತಕ್ಕ ಕಾರ್ಣ್ಯಗಳನ್ನು ತೋರಿಸದೆ ಇರುವಾಗ, ಇಂಥಾ ಆರೋಪಣೆಗಳೆಲ್ಲಾ ಹೊಟ್ಟೇಕಿಚ್ಚಿನಿಂದ ಮೇಲಕ್ಕೆ ಏಳುವ ಗುಳ್ಳೆಗಳೆಂದು ತಿಳಿಯಬೇಕಾಗಿದೆ.

ಇಂಗ್ಲಿಷ್ ದೊರೆಯ ಸಾರ್ವಭೌಮತ್ವ.

೨. ಇಂಗ್ಲಿಷ್‌ದೊರೆಯ ಸಾರ್ವಭೌಮತ್ವವನ್ನು ಸಾಲಾರಜಂಗನು ತಿರಸ್ಕರಿಸಿದನು.

ಇಂಥಾ ತಿರಸ್ಕಾರವನ್ನು ಮಾಡಿದ ಭಾವ ಎಲ್ಲಿಯೂ ದ್ಯೋತಕವಾಗಿಲ್ಲ. ಆದರೆ ಈ ವಿಚಾರ ನಿರ್ವಿವಾದವಾದ್ದೆಂದು ಹೇಗೆ ಹೇಳುವುದು ? ಕರ್ಣಾಟಕ ನವಾಬರ ಯುದ್ಧಗಳು, ಹೈದರಲ್ಲಿ ಟಿಪ್ಪೂ ಸುಲ್ತಾನರೊಡನೆ ನಡೆದ ಯುದ್ಧಗಳು, ಅದರಿಂದ ಈಚೆಗೆ ನಡೆದ ಮರಾಟೆಯುದ್ಧಗಳು, ಕಾಬೂಲಿನ ಜಗಳ, ಸಿಂಧುದೇಶದ ಜಗಳ, ಪಂಜಾಬಿನ ಜಗಳ, ಇದೆಲ್ಲಕ್ಕೂ ಹೈದರಾಬಾದಿನ ಸೇನೆ ಬಂದು ವಿಶೇಷವಾದ ಪರಾಕ್ರಮವನ್ನು ತೋರಿಸಿತು, ಎಂದು ಎಲ್ಲರೂ ಅಂಗೀಕಾರಮಾಡಿದಾರೆ. ನಾನಾರಾಯನ ದಂಗೆಯಲ್ಲಿಯಂತೂ ಮಹಾಮಂತ್ರಿಯಾದ ಸಾಲಾರಜಂಗನ ಸಹಾಯವನ್ನು ಇಂಗ್ಲಿಷರೇ ಕೊಂಡಾಡುತಿದಾರೆ. ಮಾತುಮಾತಿಗೂ ನಮ್ಮ ಮಿತ್ರನಾದ ನಿಸಾಂ ಎಂಬದಾಗಿ ಹೇಳುವ ಹೊಗಳಿಕೆಯನ್ನು ಇಂಗ್ಲಿಷರು ಇದುವರೆಗೂ ಬಿಟ್ಟಿಲ್ಲ. ಹೈದರಾಬಾದು ಸೀಮೆಯು ಇ

ಗ್ಲಿಷ್ ಸರ್ಕ್ಕಾರದವರ ಆಡಳಿತದಲ್ಲಿ ಯಾವಾಗಲೂ ಇರಲಿಲ್ಲ. ಯಾವ ಹೊಸ ಏರ್ಪಾಡಾದರೂ ತಹನಾಮೆಯು ಷರತ್ತು ಆಗಿಯೇ ಇದೆ. ನಿಜಾಮನು ಹೈದರಾಬಾದಿನ ದೊರೆ ಎಂದು ಇಂಗ್ಲಿಷರು ಮೊದಲಿನಿಂದಲೂ ಒಪ್ಪಿಕೊಂಡಿದಾರೆ. ಈ ಅಂಶವು ಪ್ರತಿ ತಹನಾಮೆಯಲ್ಲಿಯೂ ನಮೂದಾಗಿದೆ. ನಿಜಾಮನ ಒಳದೇಶದ ರಾಜ್ಯಭಾರಕ್ರಮಕ್ಕೂ ಆಡಳಿತಕ್ಕೂ ಆತನ ಪ್ರಜೆಗಳ ದೂರು ಮುಂತಾದವುಗಳಿಗೂ ಇಂಗ್ಲಿಷ್ ಸರ್ಕ್ಕಾರದವರು ಪ್ರವೇಶ ಮಾಡಕೂಡದೆಂದೂ ಸಹ ಕರಾರುಗಳಲ್ಲಿ ಸೂಚನೆಯಾಗಿದೆ. ನಿಜಾಮನ ಶತ್ರುಗಳು ದಂಡೆತ್ತಿ ಬಂದರೆ ಅವರನ್ನು ಸೋಲಿಸಿ ಓಡಿಸಿಬಿಡಲು ಸಹಾಯಮಾಡುವುದಕ್ಕಾಗಿ ಇಂಗ್ಲಿಷರು ದಂಡನ್ನು ಇಟ್ಟದಾರೆ. ಅದರ ಖರ್ಚಿಗೆ ನಿಜಾಮ ತೆರುತಾ ಇದಾನೆ. ಇವೇ ಮೊದಲಾದ ಸಂದರ್ಭಗಳಿಂದ ನಿಜಾಮನು ಸ್ವತಂತ್ರವಾದ ದೊರೆಯಾಗಿ ಇಂಗ್ಲಿಷರಿಗೆ ಮಿತ್ರನಾಗಿದಾನಲ್ಲದೆ ಅಧೀನರಾಜನಲ್ಲವೆಂದು ಸಾಲಾರಜಂಗನು ತಿಳಿದುಕೊಂಡನು. ಇಂಗ್ಲಿಷ್ ಸರ್ಕ್ಕಾರದವರು ತನ್ನ ದೊರೆಗೆ ಸಾರ್ವಭೌಮರೆಂದು ತಾನು ಅಂಗೀಕರಿಸಿವರೆ, ಅದರಿಂದ ತನ್ನ ದೊರೆಯ ಪ್ರತಿಷ್ಠೆಯನ್ನು ತಾನು ಇಳಿಸಿದಂತಾಗುವುದೆಂದು ಯೋಚಿಸಿಕೊಂಡಿದ್ದನು.

ಹಳೇಕರಾರನ್ನು ಅನುಸರಿಸತಕ್ಕದು

ಮೇಲಾಗಿ ನಿಜಾಮನು ಒಬ್ಬ ದೊರೆ. ಆತನೊಡನೆ ಇಂಗ್ಲಿಷರು ಮಾಡಿಕೊಂಡಿರುವ ಕರಾರು ಒಬ್ಬ ದೊರೆಯು ಇನ್ನೊಬ್ಬ ದೊರೆಯೊಡನೆ ಮಾಡಿಕೊಂಡ ಕರಾರಿನಂತೆ ಭಾವಿಸಬೇಕೇ ಹೊರತು ಬೇರೆಯಲ್ಲ. ಈ ಅಭಿಪ್ರಾಯವು ಬೀರಾರು ದೇಶವನ್ನು ಇಂಗ್ಲಿಷರು ವಾಪಸು ಕೊಡುವ ವಿಚಾರವಾಗಿ ಬರಿಸಿದ ಕರೀತಗಳಲ್ಲಿ ಮಾತ

ನವೂದಾಗಿದೆ. ಮತ್ತೆ ಎಲ್ಲಿಯೂ ಇಲ್ಲ. ರಾಜ್ಞಿ ಜ್ಯೇಷ್ಠಪುತ್ರನಾದ ಪ್ರಿನ್ಸ್ ಆಫ್ ವೇಲ್ಸನ್ನು ಭೇಟಿಮಾಡಿಕೊಳ್ಳಲು ನಿಸಾಂಮೀರ್ ಮಹಬೂಬಲ್ಲಿಯನ್ನು ಕಲ್ಕತ್ತೆಗೆ ಬಲವಂತವಾಗಿ ಕರೆದುಕೊಂಡು ಹೋಗಬೇಕೆಂದು ಇಂಗ್ಲಿಷ್ ರೆಸಿಡೆಂಟನು ಹಠಮಾಡಿದನು. ಸಾಲಾರಜಂಗನು ನಿಸಾಮನ ಶರೀರಕ್ಕೆ ಆಲಸ್ಯವಾದ್ದರಿಂದ ಅವನನ್ನು ಕಲ್ಕತ್ತೆಗೆ ಕರೆದುಕೊಂಡು ಹೋಗಲು ಆಗಲಾರದೆಂದು ಹೇಳಿದ್ದು, ಮಹಬೂಬನ ದೇಹದಾರ್ಢ್ಯ ದೂರದ ಪ್ರಯಾಣವನ್ನು ತಡೆಯಲಾರದೆಂಬ ಕಾರಣಕ್ಕಾಗಿಯೇ ಹೊರತು ಬೇರೆ ಇಲ್ಲ. ದೂರ ಪ್ರಯಾಣವನ್ನು ತಡೆಯುವ ಸಾಮರ್ಥ್ಯ ೯ ವರುಷದ ರಾಜನಿಗೆ ಇಲ್ಲವೆಂದೂ ಹಾಗೆ ಬಲವಂತವಾಗಿ ಕರೆದುಕೊಂಡು ಹೋದರೆ ದಾರಿಯಲ್ಲಿ ಅಪಾಯ ಸಂಭವಿಸಿದರೂ ಸಂಭವಿಸಬಹುದೆಂದೂ ರೆಸಿಡೆಂಟನ ಕಡೆ ಡಾಕ್ಟರೇ ಅಭಿಪ್ರಾಯಪಟ್ಟ ಮೇಲೆ, ಸಾಲಾರಜಂಗನ ದೋಷ ಎಷ್ಟರ ಮಟ್ಟಿಗೆ ಇರಬಹುದು? ಅಂಥಾ ಅಪಾಯ ಸಂಭವಿಸಿದರೆ, ರಾಜಪುತ್ರನಿಗೆ ದೇಹಸ್ವಸ್ಥವಿಲ್ಲವೆಂಬ ಮಾತನ್ನು ತಿಳಿಸದೇ ಹೋದ್ದು ಮಂತ್ರಿಯ ದೋಷವೆಂದು ಆಗ್ಗೂ ಆಡಿಕೊಳ್ಳಬಹುದಲ್ಲವೆ?

ಶಸ್ತ್ರದ ತಯಾರಿ

೩. ರಹಸ್ಯವಾಗಿ ಹತ್ಯಾರುಗಳನ್ನು ಮಾಡಿಸುತಾ ಇದ್ದನು.

ಈ ವಿಚಾರದಲ್ಲಿ ಯಾವದೃಷ್ಟಾಂತವೂ ದೊರೆಯಲಿಲ್ಲ. ಇದು ಇಲ್ಲದ ದೋಷಾರೋಪಣೆ. ಅಸೂಯದ ಮಾತಾಗಿದೆ.

ವಿಕಾರುಲ್‌ಉಂರನ ಜಂಟಿವಿಚಾರ

೪. ನವಾಬ ವಿಕಾರುಲ್ ಉಂರನನ್ನು ತನ್ನ ಜೊತೆಗೆ ಮಂತ್ರಿಯಾಗಿ ನೇಮಿಸ ಕೂಡದು ಎಂದು ಸಾಲಾರಜಂಗನು ಹಠಮಾಡಿದ್ದು.

ದೊರೆಗೆ ಬಾಲ್ಯಾವಸ್ಥೆ. ರಾಜ್ಯದ ಭಾರವೆಲ್ಲಾ ಪ್ರಸಿದ್ಧಮಂತ್ರಿ ಎಂದು ಅಂಗೀಕಾರವಾಗಿರುವ ತನ್ನ ಮೇಲೆ ಬಿದ್ದಿರುವುದು. ತನಗೂ ನವಾಬ ವಿಕಾರುಲ್ ಉಂರನಿಗೂ ಪರಸ್ಪರ ವೈರವಿದೆ ಎಂದು ಎಲ್ಲರಿಗೂ ಗೊತ್ತೇಇದೆ. ವಿಕಾರುಲ್ ಉಂರನು ನಡತೆಯಲ್ಲಿ ಕೇವಲ ಅಲ್ಪಮಾರ್ಗಕ್ಕೆ ಹೋಗತಕ್ಕವನಾಗಿದ್ದನು. ರೆಸಿಡೆಂಟನನ್ನು ತನ್ನ ಕಡೆಗೆ ತಿರುಗಿಸಿಕೊಳ್ಳಲು ಯತ್ನಮಾಡಿದನೆಂದು ಇವನು ಆಡಿಕೆಗೆ ಗುರಿಯಾಗಿದ್ದನು. ಇಂಥಾಮನುಷ್ಯನು ಸಾಲಾರಜಂಗನ ಜೊತೆಗೆ ಸೇರಿ ರಾಜ್ಯಭಾರದ ಆಡಳಿತಗಳನ್ನು ನಡಿಸುವುದಾದರೆ, ಆತನು ದ್ವೇಷದಿಂದಲೋ ಅವಿವೇಕದಿಂದಲೋ ವಿಪರ್ಯಾಸಗಳನ್ನು ಹುಟ್ಟಿಸಿದರೆ, ಆಗಲೂ ಜವಾಬುದಾರ ಮಂತ್ರಿಯಾದ ಸಾಲಾರಜಂಗನೇ ಗುರಿಯಾಗಬೇಕಲ್ಲವೆ! ತಾನು ಅನಾನುಭವಿ ಎಂದು ಹೇಳಿ ತನ್ನ ತಲೆಯನ್ನು ತಪ್ಪಿಸಿಕೊಳ್ಳುವ ಕುಂಟ ದಾರಿ ಹೊಸಬನಿಗೆ ಉಂಟು, ಸಾಲಾರಜಂಗನಿಗೆ ಇಲ್ಲ. ಆದ್ದರಿಂದ ರಾಜ್ಯದ ಕ್ಷೇಮಕ್ಕಾಗಿ ವಿಕಾರುಲ್ ಉಂರನನ್ನು ತನ್ನ ಜೊತೆಗೆ ನೇಮಿಸುವುದು ಕೇಡನ್ನು ತಂದೀತೆಂದು ಮಂತ್ರಿಯು ಮುಷ್ಕರ ಮಾಡಲು ಕಾರಣವಾಯಿತು. ಒಂದು ರಾಜ್ಯಭಾರವನ್ನು ಇಬ್ಬರು ಒಟ್ಟಿಗೆ ಸೇರಿ ನಡಿಸುವಾಗ ಅವರಿಬರನ್ನೂ ಗಂಡಭೇರುಂಡವೆಂಬ ಪುರಾಣಪಕ್ಷಿಯ ತಲೆಗೆ ಹೋಲಿಸಬಹುದು.. ಅಪಾಯ ಒಂದು ತಲೆಗೆ ಬಂದರೆ ಇನ್ನೊಂದು ತಲೆಗೆ ತಪ್ಪುವುದಿಲ್ಲ.

ವಿಕಾರುಲ್ ಉಂರನನ್ನು ನೇಮಿಸಕೂಡದೆಂದು ಹೇಳಿ ತರುವಾಯ ಯಾಕೆ ಒಪ್ಪಿಕೊಂಡ? ಎಂದು ಹಂಗಿಸುತಾರೆ. ಆದರೆ ಹಾಗೆ ಒಪ್ಪಿಕೊಳ್ಳಬೇಕೆಂದು ಕಲ್‌ಕತ್ತಾ ಸರ್ಕಾರದವನು ವಿಶೇಷವಾಗಿ ಬಲವಂತಮಾಡಿದರು. ಅದಕ್ಕೆ ವಿರೋಧ

ವಾಗಿ ಆಚರಿಸುವ ಮಾರ್ಗ ರಾಜೀನಾಮೆ ಕೊಡುವುದೊಂದೇ ಆಗಿತ್ತು. ಇಷ್ಟು ದಿವಸವೂ ಎಲ್ಲಾ ಕಷ್ಟಗಳನ್ನೂ ಅನುಭವಿಸಿ ರಾಜ್ಯವನ್ನು ಕೈಗೆ ತೆಗೆದುಕೊಂಡು, ದೊರೆ ಬಾಲಕನಾಗಿ ಸೀಮೆಯು ಪಾಲಕರಹಿತವಾಗಿರುವಾಗ, ಸಾಲಾರಜಂಗನು ಕೆಲಸವನ್ನು ಬಿಟ್ಟಿದ್ದರೆ, ಜನರಲ್ಲಿ ಅಪವಾದ, ಇಂಗ್ಲಿಷ್ ಸರ್ಕಾರದವರಲ್ಲಿ ಆಕ್ಷೇಪಣೆ, ತಾನು ಇಪ್ಪತ್ತು ವರುಷದಿಂದ ಶ್ರಮಪಟ್ಟು ಮಾಡಿದ ಕೆಲಸವನ್ನು ಅರೆಗಳಿಗೆಯಲ್ಲಿ ಕೆಡಿಸಿದೆವೆಂಬ ಶತ್ರುಗಳ ಆನಂದ, ಇವೆಲ್ಲಾ ಪ್ರಾಪ್ತವಾಗುವುದರ ಜೊತೆಗೆ ತಾನು ಅದುವರೆಗೆ ಸಂಪಾದಿಸಿದ ಪ್ರಖ್ಯಾತಿಯೆಲ್ಲಾ ನಾಶವಾಗಿ ಹೋಗುವುದು; ಇದೇ ಪ್ರಯೋಜನವೇ ಹೊರತು ಬೇರೆ ಇಲ್ಲ.

ರೈಲ್‌ಹಾಕುವ ವಿಚಾರ

೫. ಹೈದರಾಬಾದಿನಲ್ಲಿ ರೈಲು ಹಾಕುವದಕ್ಕಾಗಿ ಇಂಗ್ಲೆಂಡು ದೇಶದಲ್ಲಿ ಸಾಲಾ ತೆಗೆಯಲು ಯತ್ನಮಾಡಿದ್ದು ಸರಿಯಲ್ಲವೆಂಬ ಸಂಗತಿ.

ದೇಶದ ಕ್ಷೇಮಕ್ಕಾಗಿ ರೈಲ್ ರಸ್ತೆಯನ್ನು ಹಾಕಿಸತಕ್ಕದ್ದು ಅಗತ್ಯವಾಗಿತ್ತು. ಇದಕ್ಕೆ ಬೇಕಾದ ಹಣವನ್ನು ಸಾಲಾ ತೆಗೆಯಬೇಕಾಗಿ ಬಂತು. ಹೈದರಾಬಾಧಿನ ಕೆಲವು ಸಾಹುಕಾರರು ಈ ಸಾಲವನ್ನು ತೆಗೆಯುವುದು, ಇದಕ್ಕೆ ಮಂತ್ರಿ ಜಾಮೀನಾಗುವುದು, ಹಣವನ್ನು ರೈಲ್ ಹಾಕಲು ಉಪಯೋಗಿಸಿಕೊಳ್ಳುವುದು, ಹೀಗೆಂದು ಗೊತ್ತಾಗಿತ್ತು. ಯೂರೋಪುದೇಶದ ಜನರಲ್ಲಿ ಇಂಥಾ ಸಾಲವನ್ನು ಈ ದೇಶದ ದೊರೆಗಳು ತೆಗೆಯಬೇಕಾದರೆ, ಬ್ರಿಟಿಷ್‌ಸರ್ಕಾರದವರ ಮೂಲಕವೇ ಹೊರತು ಸ್ವತಂತ್ರಿಸಿ ಈ ಕೆಲಸಕ್ಕೆ ಪ್ರವೇಶ ಮಾಡಕೂಡದೆಂದು ತಹನಾಮೆಯಲ್ಲಿ ಒಂದು ಷರತ್ತು ಇದೆ. ಅದರಂತೆ ಈ ಸಾಲವನ್ನು ಬ್ರಿಟಿಷ್‌ಸರ್ಕಾರದವರ ಮೂಲಕವೇ ಮಾಡಬೇಕಾಗಿತ್ತು, ಎಂಬ ಕಾರಣದ ಮೇಲೆ ಆ ಸಾಲದ ಕರಾರನ್ನು

ತಪ್ಪಿಸಿ ಬ್ರಿಟಿಷ್ ಸರ್ಕಾರದವರು ಬೇರೆ ಸಾಲವನ್ನು ಕೊಡಿಸಿದರು. ಸಾಲಾರಜಂಗನು ಸಾಹುಕಾರರ ಮೂಲಕ ತರಿಸಬೇಕೆಂದು ಇದ್ದ ಸಾಲದ ಬಡ್ಡಿ ದರಕ್ಕಿಂತ ಬ್ರಿಟಿಷ ಸರ್ಕಾರದ ಮೂಲಕ ಏರ್ಪಾಡಾದ ಬಡ್ಡಿಯ ದರ ಕಡಮೆಯಾಗಿತ್ತು. ಇದರಿಂದ ಆ ಮಂತ್ರಿ ದೊಡ್ಡ ಅಪರಾಧವನ್ನು ಮಾಡಿದಂತೆ ಭಾವಿಸಲು ಕಾರಣ ತೋರಲಿಲ್ಲ.

ಹೊಸಸೇನೆ ಏರ್ಪಾಡು

೬, ಹೊಸ ಏರ್ಪಾಡಿನ ಸೇನೆ (Reformed Troops) ಯನ್ನು ಯೂರೋಪ್ರದೇಶದ ಸರದಾರರುಗಳಿಂದ ತಯಾರ್ಮಾಡಿಸಿ ಇರಿಸಿದ್ದು—ಈ ಸೇನೆಯು ಬ್ರಿಟಿಷ್ ಸರ್ಕಾರದವರ "ಕಂಟಿಂಜಂಟು" ಎಂಬ ಸಹಾಯ ಸೇನೆಯ ಕೆಲಸವನ್ನು ಮಾಡಲು ತಯಾರ್ಮಾಡಿಸಿದ್ದು ನಿಜ. ಯಾವ ಗಡಬಿಡಿಯಾದರೂ ಅದನ್ನು ಅಡಗಿಸಲು ಈ ಸೇನೆಯು ಸಾಕಾಗಿದೆ. ಬ್ರಿಟಿಷ್‌ನವರ ಕಂಟಿಂಜಂಟು ಸಹಾಯ ಸೇನೆ ಅಗತ್ಯವಿಲ್ಲ. ಆದ್ದರಿಂದ ಈ ಸಹಾಯಸೇನೆಯನ್ನು ಬ್ರಿಟಿಷ್ ಸರ್ಕಾರದವರು ತೆಗೆದು ಬಿಡಬಹುದು, ಈ ಸೇನೆ ಹೋದಕೂಡಲೆ ಅದರ ಖರ್ಚು ನಿಜಾಂಸರ್ಕಾರಕ್ಕೆ ಉಳಿಯಬೇಕು, ಈ ಖರ್ಚು ನಿಂತ ಕೂಡಲೆ ಅದಕ್ಕಾಗಿ ಬಿಡಿಸಿಕೊಂಡಿರುವ ಬೀರಾರು ದೇಶವನ್ನು ಇಂಗ್ಲಿಷರು ಬಿಟ್ಟುಕೊಡಲೇ ಬೇಕು. ಇದಕ್ಕೆ ಇಂಗ್ಲಿಷ್ ಸರ್ಕಾರದವರು ಒಪ್ಪಲಿಲ್ಲ.

ಇದೇ ಮೊದಲಾದ ಅನೇಕ ಆಕ್ಷೇಪಣೆಗಳನ್ನು ಇಂಗ್ಲಿಷ್ ಉದ್ಯೋಗಸ್ಥರು ಸಾಲಾರಜಂಗನ ಮೇಲೆ ತಂದು ಅವನ ಮನಸ್ಸನ್ನು ಕೆಡಿಸಿದರು. ಇಂಗ್ಲೆಂಡಿನಲ್ಲಿ ರಾಬರ್ಟುನೈಟು ಎಂಬಾತನು ಸ್ಟೇಟ್ಸ್ಮನ್ ಎಂಬ ಪತ್ರಿಕೆಯಲ್ಲಿ ಸಾಲಾರಜಂಗನ ಶತ್ರುಗಳು ಮಾಡಿದ ಭರ್ತ್ಸನೆಯನ್ನು ಬಹಿರಂಗವಾಗಿ ಆಕ್ಷೇಪಿಸಿದನು. ವಿಕಾರುಲ್ ಉಮ್ರನ ಬಣ್ಣವೂ ಇದರಲ್ಲಿ ರಚಿತವಾಗಿತ್ತು. ಅವನ ಮೂಲಕ

ಇಂಗ್ಲೆಂಡಿನಲ್ಲಿ ನೈಟನಮೇಲೆ ನೆಪಮಾತ್ರಕ್ಕೆ ಫಿರ್ಯಾದುಮಾಡಿಸಿ ಈ
ಮಂತ್ರಿಗೆ ಅವಮಾನಮಾಡಬೇಕೆಂದು ಇವನ ಶತ್ರುಗಳು ಮಾಡಿದ
ಏರ್ಪಾಡನ್ನು ಅನೇಕ ರಾಜತಂತ್ರದ ವಿಷಯ ಬಹಿರಂಗವಾದೀ
ತೆಂದು ಇಂಗ್ಲಿಷ್ ಸರ್ಕಾರದವರು ಒಪ್ಪಲಿಲ್ಲ. ತಮ್ಮ ಚಿಕ್ಕಪ್ಪನ ದಿವ
ಸದಲ್ಲಿ ಇಂಗ್ಲಿಷ್ ಸರ್ಕಾರದವರು ತೆಗೆದುಕೊಂಡ ಬೀರಾರು ದೇಶ
ವನ್ನು ಹೇಗಾದರೂ ಬರಮಾಡಿಕೊಂಡು ತಮ್ಮ ಚಿಕ್ಕಪ್ಪನಿಗೆ ಬಂದ
ಅಪವಾದವನ್ನು ತಪ್ಪಿಸಬೇಕೆಂದು ಸಾಲಾರಜಂಗನು ಮಾಡಿದ ಚೆತ್ರ
ರೋಪಾಯವು ಸಾಗಲಿಲ್ಲ. ಇಂಥಾ ಶಕ್ತಿಯನ್ನೂ ಇಂಥಾ ಸ್ವಾಮಿ
ಭಕ್ತಿಯನ್ನೂ ಉಳ್ಳ ಮಂತ್ರಿಗಳು ಮುಂದಕ್ಕೆ ಯಾರಾದರೂ ಸಿಕ್ಕಿ
ಯಾರೋ ಇಲ್ಲವೋ ತಿಳಿಯದು. ಯೂರೋಪು ದೇಶಗಳಿಗೆ ಹೋಗಿ
ಬಂದದರಿಂದಲೂ, ಮತ್ತು ತನ್ನ ದೊರೆಯ ಗೌರವವನ್ನು ಕಾಪಾ
ಡಿಕೊಳ್ಳಬೇಕಾದ್ದರಿಂದಲೂ, ಸಾಲಾರಜಂಗನಿಗೆ ಸಾಯುವಾಗ
ಇಪ್ಪತ್ತು ಲಕ್ಷರೂಪಾಯಿ ಸಾಲವಿತ್ತು. ನಿಸ್ಪೃಹರ ಗತಿ ಎಲ್ಲಾ
ಇಷ್ಟೇಸರಿ.



## Kannada Works by the same Author.

---

| | | |
|---|---|---|
| 1. Shakespeare's Cymbline in Kannada | ... | |
| 2. " King Lear " | ... | 0-6-0 |
| 3. Bigger Indian History 2 Parts | ... | 0-6-0 |
| 4. Small " | ...] | |
| 5. Life of Confucius—the Chinese Philosopher | | |
| 6. " K. Ramasa Sastry— " | | |
| 7. Sumati Madanakumara Charitre, I Part | | 0-8-0 |
| " II Part | | 0-7-0 |
| 8. Life of Palisse (Glass works) | ... | |
| 9. " W. Murdock (gas light) | ... | |
| 10. Kannada Composition ... | ... | |
| 11. Nithichintamani (Moral Reader) in 3 Parts | | |
| 12. "Madidunno Maharaya" (a wonderful story) ... ... | ... | 0-12-0 |
| 13. "Remove the Veil, you Enchanted woman" (a woderful story) ... | ... | |
| 14. Ingrtaitude " ... | ... | |
| 15. Life of Sir Salar Jung (Hyderabad) | ... | |
| 16. " Mahamud Gawan, (the great Minister of the Bahamani Kingdom) | ... | |
| 17. Reader I (Mysore Education Depart.) | .... | |

---

*N. B.—Works* No. 1, 2, 3, 4, 5, 7, 10, 11, 12 and 17 were Text Books in Schools and Colleges.

